## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಗ್ರಾಅಪ 55 ಎಸ್ ಜಿ ವೈ (ಇನ್‌ಫ್ರಾ) 2011, ಬೆಂಗಳೂರು ದಿನಾಂಕ: 1–03–2012**

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 55 ಎಸ್ ಜಿ ವೈ (ಇನ್‌ಫ್ರಾ) 2011 ದಿನಾಂಕ 09–02–2012 ರಲ್ಲಿನ ಕೆಳಕಂಡ ಷರತ್ತು**

–ಆಡಳಿತ ನಿರ್ದೇಶಕರು, ಶ್ರೀ ಧರ್ಮಸ್ಥಳ ಸಿರಿ ಗ್ರಾಮೋದ್ಯೋಗ ಸಂಸ್ಥೆ (ರಿ), ಲ್ಯಾಲ–ಬೆಳ್ತಂಗಡಿ, ದಕ್ಷಿಣ ಕನ್ನಡ ರವರು ರುಜು ಮಾಡಿದ ಸ್ವೀಕೃತ ರಸೀದಿ (Payees Receipt) ಯನ್ನು ಸರ್ಕಾರಕ್ಕೆ ಸಲ್ಲಿಸುವುದು. ನಂತರ Payees Receipt ಗೆ ನಿರ್ದೇಶಕರು (ಗ್ರಾಮೂಸೌ–2) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರು ಮೇಲುರುಜು ಮಾಡುವುದು ಹಾಗೂ ಉಪ ನಿರ್ದೇಶಕರು (ಸ್ವಉಕಾ). ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರು ಸದರಿ Payees Receipt ಯನ್ನು ರಾಜ್ಯ ಹುಜೂರು ಖಜಾನೆ, ಬೆಂಗಳೂರು ರವರಿಗೆ ಸಲ್ಲಿಸಿ, Financial Instrument (ಚೆಕ್) ಪಡೆದು ಆಡಳಿತ ನಿರ್ದೇಶಕರು, ಶ್ರೀ ಧರ್ಮಸ್ಥಳ ಸಿರಿ ಗ್ರಾಮೋದ್ಯೋಗ ಸಂಸ್ಥೆ (ರಿ), ಲ್ಯಾಲ–ಬೆಳ್ತಂಗಡಿ, ದಕ್ಷಿಣ ಕನ್ನಡ ರವರಿಗೆ ನೀಡಿ ಸ್ವೀಕೃತಿ ಪಡೆಯತಕ್ಕದ್ದು ಎಂತಿರುವುದನ್ನು,

**ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.**

–ಆಡಳಿತ ನಿರ್ದೇಶಕರು, ಶ್ರೀ ಧರ್ಮಸ್ಥಳ ಸಿರಿ ಗ್ರಾಮೋದ್ಯೋಗ ಸಂಸ್ಥೆ (ರಿ), ಲ್ಯಾಲ–ಬೆಳ್ತಂಗಡಿ, ದಕ್ಷಿಣ ಕನ್ನಡ ರವರು ರುಜು ಮಾಡಿದ ಸ್ವೀಕೃತ ರಸೀದಿ (Payees Receipt) ಯನ್ನು ಜಿಲ್ಲಾ ಪಂಚಾಯತ್ ದಕ್ಷಿಣ ಕನ್ನಡ ಜಿಲ್ಲೆ ರವರಿಗೆ ಸಲ್ಲಿಸುವುದು ನಂತರ (Payees Receipt) ಗೆ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಜಿಲ್ಲಾ ಪಂಚಾಯತ್ ದಕ್ಷಿಣ ಕನ್ನಡ ಜಿಲ್ಲೆರವರು ಮೇಲುರುಜು ಮಾಡುವುದು, ಹಾಗೂ ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್ ದಕ್ಷಿಣ ಕನ್ನಡ ಜಿಲ್ಲೆರವರು ಸದರಿ (Payees Receipt) ಯನ್ನು ಜಿಲ್ಲಾ ಖಜಾನೆ, ದಕ್ಷಿಣ ಕನ್ನಡ ಜಿಲ್ಲೆ ರವರಿಗೆ ನೀಡಿ, Financial Instrument (ಚೆಕ್) ಪಡೆದು ಆಡಳಿತ ನಿರ್ದೇಶಕರು, ಶ್ರೀ ಧರ್ಮಸ್ಥಳ ಸಿರಿ ಗ್ರಾಮೋದ್ಯೋಗ ಸಂಸ್ಥೆ (ರಿ), ಲ್ಯಾಲ–ಬೆಳ್ತಂಗಡಿ, ದಕ್ಷಿಣ ಕನ್ನಡ ರವರಿಗೆ ನೀಡಿ ಸ್ವೀಕೃತಿ ಪಡೆಯತಕ್ಕದ್ದು.

ಮೇಲ್ಕಂಡ ಸರ್ಕಾರದ ದಿನಾಂಕ, 09–02–2012 ರ ಆದೇಶ ಮತ್ತು ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ–2)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 682

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಎಸ್‌ಜಿಎಸ್‌ವೈ ಗೆ ರಾಜ್ಯದ ಪಾಲಿನ 2010–11ನೇ ಸಾಲಿನ ಒಂದನೇ ಕಂತಿನ ಅನುದಾನವನ್ನು ಕೋಲಾರ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರ ಸಂಖ್ಯೆ : ಜೆ 12022/2010/ಎಸ್‌ಜಿಎಸ್‌ವೈ–1 (9) ದಿನಾಂಕ 04–05–2010.

(2) ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜಿವೈ 2010, ಬೆಂಗಳೂರು, ದಿನಾಂಕ : 15–11–2010.

(3) ಮುಕಾನಿ, ಜಿಲ್ಲಾ ಪಂಚಾಯತ್, ಕೋಲಾರ ಇವರ ಪತ್ರ ಸಂಖ್ಯೆ : ಜಿಪಂಕೋ : ಮುಲೆಅ : ಲೆಶಾ : ಯೋಜನೆ : ಎಸ್‌ಜಿಎಸ್‌ವೈ:2011–12 ದಿನಾಂಕ 10–11–2011.

**ಪ್ರಸ್ತಾವನೆ :**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75: 25 ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಸರ್ಕಾರ ಓದಲಾಗಿದೆ (1) ರಲ್ಲಿ ಕೋಲಾರ ಜಿಲ್ಲಾ ಪಂಚಾಯತಿಗೆ 2010–11 ನೇ ಸಾಲಿಗೆ ಒಂದನೇ ಕಂತಿನ ಅನುದಾನ ₹ 1,37,72,000 ಬಿಡುಗಡೆ ಮಾಡಿತ್ತು. ಇದರನ್ವಯ ರಾಜ್ಯ ಸರ್ಕಾರವು ಓದಲಾಗಿದೆ (2) ರಲ್ಲಿ ಕೋಲಾರ ಜಿಲ್ಲಾ ಪಂಚಾಯತಿಗೆ 2010–11ನೇ ಸಾಲಿಗೆ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ₹ 45,91,000 ಗಳನ್ನು ಹಾಗೂ 2009–10 ನೇ ಸಾಲಿನ ಉಳಿಕೆ ಅನುದಾನ ₹ 4,52,000 ಒಟ್ಟಾರೆ ₹ 50,43,000 ಬಿಡುಗಡೆ ಮಾಡಿತ್ತು. ಆದರೆ, ಕೋಲಾರ ಜಿಲ್ಲಾ ಪಂಚಾಯತಿ ಸದರಿ ಅನುದಾನವನ್ನು ಡ್ರಾ ಮಾಡಿಲ್ಲದ ಬಗ್ಗೆ ನಾ ಪಾವತಿ ದೃಢೀಕರಣ ಪತ್ರ ನೀಡಿ, ಈ ಅನುದಾನವನ್ನು 2011–12 ನೇ ಸಾಲಿನಲ್ಲಿ ಬಿಡುಗಡೆ ಮಾಡುವಂತೆ ಓದಲಾಗಿದೆ (3) ರಲ್ಲಿ ಕೋರಿರುತ್ತಾರೆ.

ಮಾರ್ಗಸೂಚಿಯನ್ವಯ 2010–11 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ಬಿಡುಗಡೆ ಮಾಡಬೇಕು. ನಿಗದಿತ ಅನುದಾನವನ್ನು ರಾಜ್ಯ ಸರ್ಕಾರ ಬಿಡುಗಡೆ ಮಾಡದಿದ್ದಲ್ಲಿ 2011–12ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವಾಗ, ಈ ಕಾರಣಕ್ಕಾಗಿ ಅನುದಾನವನ್ನು ಕಡಿತಗೊಳಿಸಿ ಬಿಡುಗಡೆ ಮಾಡುವರು. ಆದ

ಕಾರಣ, 2010–11ನೇ ಸಾಲಿನ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ₹ 45,91,000 ಗಳನ್ನು 2011–12 ನೇ ಸಾಲಿನ ಆಯವ್ಯಯದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ: 21.02.2012**

ರಾಜ್ಯ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಕೋಲಾರ ಜಿಲ್ಲಾ ಪಂಚಾಯತಿಗೆ 2010–11 ನೇ ಸಾಲಿನಲ್ಲಿ ಬಿಡುಗಡೆ ಮಾಡಿದ್ದ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನವನ್ನು ನವೀಕರಿಸಿ ₹ 45,91,000 (ನಲವತ್ತೈದು ಲಕ್ಷದ ತೊಂಬತ್ತೊಂದು ಸಾವಿರ ಮಾತ್ರ) ಗಳನ್ನು 2011–12 ನೇ ಸಾಲಿನ ಆಯವ್ಯಯದಿಂದ ಭರಿಸಿ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2010–11ನೇ ಸಾಲಿನ ಒಂದನೇ ಕಂತಿನ ರಾಜ್ಯ ಪಾಲಿನ ಅನುದಾನವನ್ನು 2011–12ನೇ ಸಾಲಿನಲ್ಲಿ ಭರಿಸಿ ಬಿಡುಗಡೆ ಮಾಡುತ್ತಿರುವುದು |
|---|---|---|---|---|
| 1 | ಕೋಲಾರ | 404 | 0700ZZ8002 | ₹ 45,91,000 |

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಅನುದಾನವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2011–2012 ನೇ ಲಿಂಕ್ ಕೋಡ್ 2501–01–198–6–01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501–01–101–0–13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ:ಗ್ರಾಅಪ 14 ಎಸ್‌ಜೆವೈ 2007 ದಿನಾಂಕ 18–04–2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2011–12 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾದನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5 ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು, (ಗ್ರಾಮೂಸೌ–2) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 8 ಪಿಬಿಎಸ್ 2011–12 ದಿನಾಂಕ 04–01–2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 683

**ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ–2) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2011–12 ನೇ ಸಾಲಿನಲ್ಲಿ ಸರ್ಕಾರ ಹಾಗೂ ಖಾಸಗಿ ವೈದ್ಯಕೀಯ/ದಂತ ವಿಜ್ಞಾನ ಕಾಲೇಜುಗಳ ನಡುವೆ ಸೀಟು ಹಂಚಿಕೆ ಹಾಗೂ ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಮಾಡಿಕೊಳ್ಳಲಾಗಿರುವ ಒಪ್ಪಂದದ (consensual agreement) ಅನುಷ್ಠಾನದ ಮೇಲುಸ್ತುವಾರಿಗಾಗಿ ರಚಿತವಾಗಿರುವ ಏಕ ಸದಸ್ಯ ಮೇಲ್ವಿಚಾರಣಾ ಸಮಿತಿಗೆ (Single Member Monitoring Committee) ಸದಸ್ಯರನ್ನು ನೇಮಿಸುವ ಬಗ್ಗೆ

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ:ಆಕುಕ 103 ಆರ್‌ಜಿಯು 2011, ದಿನಾಂಕ 13.07.2011
2) ಡಾ॥ ಕೆ. ಸುಧಾರಾವ್, ಸದಸ್ಯರು, ಏಕ ಸದಸ್ಯ ಮೇಲುಸ್ತುವಾರಿ ಸಮಿತಿ, ಬೆಂಗಳೂರು ಇವರ ಪತ್ರ ದಿನಾಂಕ 17.10.2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2011–12 ನೇ ಸಾಲಿನಲ್ಲಿ ಸೀಟು ಹಂಚಿಕೆ ಹಾಗೂ ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಸರ್ಕಾರ ಹಾಗೂ ಖಾಸಗಿ ವೈದ್ಯಕೀಯ/ದಂತ ವಿಜ್ಞಾನ ಕಾಲೇಜುಗಳ ಸಂಘ (Comed-K) ಹಾಗೂ ಕರ್ನಾಟಕ ಧಾರ್ಮಿಕ ಭಾಷಾ ಅಲ್ಪಸಂಖ್ಯಾತ ಕಾಲೇಜುಗಳ ಸಂಘಗಳ (KRLMPCA) ನಡುವೆ ಮಾಡಿಕೊಳ್ಳಲಾಗಿರುವ ಒಪ್ಪಂದದ (consensual agreement) ಅನುಷ್ಠಾನದ ಮೇಲುಸ್ತುವಾರಿಗಾಗಿ ರಚಿತವಾಗಿರುವ ಏಕ ಸದಸ್ಯ ಮೇಲ್ವಿಚಾರಣಾ ಸಮಿತಿಗೆ Single Member Monitoring Committee) ಸದಸ್ಯರನ್ನಾಗಿ ಡಾ॥ ಸುಧಾರಾವ್, ಮಾಜಿ ಉಪ ಕುಲಪತಿಗಳು, ಕರ್ನಾಟಕ ರಾಜ್ಯ ತೆರೆದ ವಿಶ್ವವಿದ್ಯಾಲಯ, ಮೈಸೂರು ಇವರನ್ನು ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಡಾ॥ ಕೆ. ಸುಧಾರಾವ್, ಸದಸ್ಯರು, ಏಕ ಸದಸ್ಯ ಮೇಲುಸ್ತುವಾರಿ ಸಮಿತಿ, ಬೆಂಗಳೂರು ಇವರು ರಾಜ್ಯ ಸರ್ಕಾರವು 2011–12 ನೇ ಸಾಲಿನಲ್ಲಿ ಸೀಟು ಹಂಚಿಕೆ ಹಾಗೂ ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಸರ್ಕಾರ ಹಾಗೂ ಖಾಸಗಿ ವೈದ್ಯಕೀಯ/ದಂತ ವಿಜ್ಞಾನ ಕಾಲೇಜುಗಳ ನಡುವೆ ಮಾಡಿಕೊಳ್ಳಲಾಗಿರುವ ಒಪ್ಪಂದದ (consensual agreement) ಮೇಲುಸ್ತುವಾರಿಗಾಗಿ ತಮ್ಮನ್ನು ಏಕ ಸದಸ್ಯ ಮೇಲ್ವಿಚಾರಣಾ ಸಮಿತಿಗೆ ಸದಸ್ಯರನ್ನಾಗಿ ನೇಮಿಸಲಾಗಿತ್ತೆಂದು, ಆದರೆ, ಪ್ರಸ್ತುತ ತಾವು ಮುಖ್ಯ ಕಾರ್ಯನಿರ್ವಹಣಾಧಿಕಾರಿಯಾಗಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಶಿಕ್ಷಣ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ, ಈ ಸಂಸ್ಥೆಯೂ ಕೂಡ ಏಕ ಸದಸ್ಯ ಮೇಲ್ವಿಚಾರಣಾ ಸಮಿತಿಯ ವ್ಯಾಪ್ತಿಗೆ ಒಳಪಡುವುದರಿಂದ, ಸದರಿ ಸಮಿತಿಯ ಸದಸ್ಯರಾಗಿ ಕಾರ್ಯ ನಿರ್ವಹಿಸುವುದು ತಮಗೆ ಮಾನಸಿಕವಾಗಿ ಸಾಧ್ಯವಾಗುತ್ತಿಲ್ಲವೆಂದು ತಿಳಿಸುತ್ತಾ ಏಕ ಸದಸ್ಯ ಮೇಲ್ವಿಚಾರಣಾ ಸಮಿತಿಯ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಸಲ್ಲಿಸಿರುವುದಾಗಿ ಸರ್ಕಾರಕ್ಕೆ ತಿಳಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, 2011–12 ನೇ ಸಾಲಿನಲ್ಲಿ ಸೀಟು ಹಂಚಿಕೆ ಹಾಗೂ ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಸರ್ಕಾರ ಹಾಗೂ ಖಾಸಗಿ ವೈದ್ಯಕೀಯ/ದಂತ ವಿಜ್ಞಾನ ಕಾಲೇಜುಗಳ ಸಂಘ (Comed-K) ಹಾಗೂ ಕರ್ನಾಟಕ ಧಾರ್ಮಿಕ ಭಾಷಾ ಅಲ್ಪಸಂಖ್ಯಾತ ವೃತ್ತಿಪರ ಕಾಲೇಜುಗಳ ಸಂಘ (KRLMPCA) ಇವುಗಳ ನಡುವೆ ಮಾಡಿಕೊಳ್ಳಲಾಗಿರುವ ಒಪ್ಪಂದದ (consensual agreement) ಅನುಷ್ಠಾನದ ಮೇಲುಸ್ತುವಾರಿಗಾಗಿ ರಚಿತವಾಗಿರುವ ಏಕ ಸದಸ್ಯ ಮೇಲ್ವಿಚಾರಣಾ ಸಮಿತಿಯ (Single Member Monitoring Committee) ಸದಸ್ಯರಾದ ಡಾ॥ ಕೆ. ಸುಧಾರಾವ್ ಇವರ ರಾಜೀನಾಮೆಯಿಂದ ತೆರವಾದ ಜಾಗಕ್ಕೆ ಡಾ॥ ಕಿಂಚಾ ಹೆಚ್.ಬಿ. ನಿವೃತ್ತ ಉಪಕುಲಪತಿ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಂಗಳೂರು ಇವರನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 103 ಆರ್‌ಜಿಯು 2011, ಬೆಂಗಳೂರು, ದಿನಾಂಕ: 12.01.2012**

ಡಾ॥ ಕಿಂಚಾ ಹೆಚ್.ಬಿ., ನಿವೃತ್ತ ಉಪಕುಲಪತಿಗಳು, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಂಗಳೂರು ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ 2011–12 ನೇ ಸಾಲಿನಲ್ಲಿ ಸೀಟು ಹಂಚಿಕೆ ಹಾಗೂ ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಸರ್ಕಾರ ಹಾಗೂ ಖಾಸಗಿ ವೃದ್ಯಕೀಯ/ ದಂತ ವಿಜ್ಞಾನ ಕಾಲೇಜುಗಳ ಸಂಘ (Comed-K) ಹಾಗೂ ಕರ್ನಾಟಕ ಧಾರ್ಮಿಕ ಭಾಷಾ ಅಲ್ಪಸಂಖ್ಯಾತ ವೃತ್ತಿಪರ ಕಾಲೇಜುಗಳ ಸಂಘ (KRLMPCA) ಇವುಗಳ ನಡುವೆ ಮಾಡಿಕೊಳ್ಳಲಾಗಿರುವ ಒಪ್ಪಂದದ (consensual agreement) ಅನುಷ್ಠಾನದ ಮೇಲುಸ್ತುವಾರಿಗಾಗಿ ರಚಿತವಾಗಿರುವ **"ಏಕ ಸದಸ್ಯ ಮೇಲ್ವಿಚಾರಣಾ ಸಮಿತಿಯ"** (Single Member Monitoring Committee) ಸದಸ್ಯರನ್ನಾಗಿ ನೇಮಿಸಲಾಗಿದೆ.

ಈ ಸಮಿತಿಯು ಕೆಳಕಂಡ ಅಂಶಗಳ ಬಗ್ಗೆ ಪರಿಶೀಲಿಸತಕ್ಕದ್ದು.

1. To ensure implementation of fee structure consensually arrived at as in the Consensual agreement.
2. To ensure proper implementation of the regulations as entered into in the Consensual Agreement.
3. To receive the complaints with reference to the consensual agreement and resolve the disputes/differences, if any, among all the stake holders after affording an opportunity of being duely heard.

ಇದಕ್ಕೆ ಸಂಬಂಧಿಸಿದಂತೆ ಇತರೆ ಷರತ್ತು ಮತ್ತು ನಿಬಂಧನೆಗಳೊಂದಿಗೆ ಪಾವತಿಸಬಹುದಾದ ಸಂಭಾವನೆಯ ಬಗ್ಗೆ ಪ್ರತ್ಯೇಕವಾದ ಆದೇಶವನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 684

**ಎ.ಕೆ. ಭೈರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ತಿದ್ದುಪಡಿ–3**

**ಸಂಖ್ಯೆ: ಮಮಇ/50/ಪಿಹೆಚ್‌ಪಿ/2012, ಬೆಂಗಳೂರು ದಿನಾಂಕ: 18–02–2012**

ಸರ್ಕಾರದ ಆದೇಶ ಸಂಖ್ಯೆ: ಮಮಇ/143/ಪಿಹೆಚ್‌ಪಿ/2011, ದಿನಾಂಕ: 22.10.2011ಕ್ಕೆ ಹೊರಡಿಸಲಾಗಿರುವ ತಿದ್ದುಪಡಿ–2 ಆದೇಶ ಸಂಖ್ಯೆ: ಮಮಇ 50 ಪಿಹೆಚ್‌ಪಿ 2012 ದಿನಾಂಕ: 08.02.2012ಕ್ಕೆ ಈ ಕೆಳಕಂಡಂತೆ 2ನೇ ಕಂಡಿಕೆಯನ್ನು ಸೇರಿಸಿ ತಿದ್ದಿ ಓದಿಕೊಳ್ಳತಕ್ಕದ್ದು

> "ತರಬೇತಿ ಗೌರವಧನ ಹಾಗೂ ಕಛೇರಿ ವೆಚ್ಚಗಳಿಗೆ ಸಂಬಂಧಿಸಿದಂತೆ ರೂ. 55,88,275/–ಗಳನ್ನು ಲೆಕ್ಕಶೀರ್ಷಿಕೆ: 2235–02–101–0–51 ಯೋಜನೆ ಉಪ ಲೆಕ್ಕಶೀರ್ಷಿಕೆ:059 ಇತರೆ ಖರ್ಚುಗಳು ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ರೂ. 55.89 ಲಕ್ಷಗಳ ಆಯವ್ಯಯದಲ್ಲಿ ಹಂತ ಹಂತವಾಗಿ ಪಾವತಿಸಲು ಅನುಕೂಲವಾಗುವಂತೆ ಸ್ವೀಕರ್ತನ ರಸೀದಿ/ಅನುದಾನದ ಬಿಲ್ ಸಿಬಿಆರ್ ನೆಟ್‌ವರ್ಕ್ [ಸೌತ್ ಏಷಿಯಾ], ಬೆಂಗಳೂರು ರವರು ಸಹಿ ಮಾಡಿ, ನಿರ್ದೇಶಕರು, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರು ಮೇಲುಸಹಿ ಮಾಡಿ ಪಾವತಿಸಲು ಆದೇಶಿಸಲಾಗಿದೆ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 685

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 5054–ಇತರೆ ರಸ್ತೆ ನಿರ್ಮಾಣ ಶೀರ್ಷಿಕೆಯಡಿ ಅನುಮೋದನೆಯಾದ ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ಬಾಗಲಕೋಟೆ ಬಿಳಿಗಿರಿ ರಂಗನಬೆಟ್ಟ ರಸ್ತೆ ಕಿ.ಮೀ. 344.00 ರಿಂದ 351.00 ರವರೆಗೆ ಆಯ್ದ ಭಾಗಗಳಲ್ಲಿ ಅಭಿವೃದ್ಧಿ ಕಾಮಗಾರಿಯ ವರ್ಕ್‌ಸ್ಲಿಪ್ ಪ್ರಸ್ತಾವನೆಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಗಳು ಸಂಖ್ಯೆ: ಮುಇಂ/ಸಂಕದ/ರಶಾ/ಸಇಂ3/2009–10. ದಿನಾಂಕ 04.02.2010. ಮುಇಂ / ಸಂಕದ / ರಶಾ / ಸಇಂ3 / 2010–11. ದಿನಾಂಕ: 04.08.2010 ಮತ್ತು ದಿನಾಂಕ 07–04–2011 ಹಾಗೂ ಮುಇಂ / ಸಂಕದ / ರಶಾ / ಸಇಂ3 / 2011–12, ದಿನಾಂಕ 23–06–2011.

**ಪ್ರಸ್ತಾವನೆ :**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಇವರ ಪತ್ರಗಳಲ್ಲಿ 5054–ಇತರೆ ರಸ್ತೆ ನಿರ್ಮಾಣ ಶೀರ್ಷಿಕೆಯಡಿ ಅನುಮೋದನೆಯಿಂದ ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ಬಾಗಲಕೋಟೆ ಬಿಳಿಗಿರಿ–ರಂಗನಬೆಟ್ಟ ರಸ್ತೆ ಕಿ.ಮೀ. 344.00 ರಿಂದ 351.00 ರವರೆಗೆ ಆಯ್ದ ಭಾಗಗಳಲ್ಲಿ ಅಭಿವೃದ್ಧಿ ಕಾಮಗಾರಿಯ ವರ್ಕ್‌ಸ್ಲಿಪ್ ಪ್ರಸ್ತಾವನೆಗೆ ಅನುಮೋದನೆ ನೀಡುವ ಕುರಿತು ಪ್ರಸ್ತಾಪಿಸಲಾಗಿದೆ.

5054–ಇತರೆ ರಸ್ತೆ ನಿರ್ಮಾಣ ಶೀರ್ಷಿಕೆಯಡಿ ಅನುಮೋದನೆಯಾದ ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ಬಾಗಲಕೋಟೆ ಬಿಳಿಗಿರಿ ರಂಗನಬೆಟ್ಟ ರಸ್ತೆ ಕಿ.ಮೀ. 344.00 ರಿಂದ 351.00 ರವರೆಗೆ ಆಯ್ದ ಭಾಗಗಳಲ್ಲಿ ಅಭಿವೃದ್ಧಿ ಕಾಮಗಾರಿಯ ರೂ. 500 ಲಕ್ಷಗಳ ಅಂದಾಜು ಮೊತ್ತಕ್ಕೆ ಸರ್ಕಾರದ ಆದೇಶ ಸಂಖ್ಯೆ: ಲೋಇ 719 ಸಿಆರ್‌ಎಂ 2008, ದಿನಾಂಕ: 24.12.2008 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಸದರಿ ಕಾಮಗಾರಿಗಳಿಗೆ ಸಚಿವ ಸಂಪುಟದ ಅನುಮೋದನೆ ಪಡೆಯದೆ ಆಡಳಿತಾತ್ಮಕ ಅನುಮೋದನೆ ನೀಡಿರುವುದು ಕಂಡು ಬಂದಿರುತ್ತದೆ. ಸದರಿ ಕಾಮಗಾರಿಯನ್ನು ಕಡಿಮೆ ಬಿಡ್‌ದಾರರಿಗೆ ರೂ. 547.81 ಲಕ್ಷಗಳಿಗೆ ಗುತ್ತಿಗೆ ನೀಡಲಾಗಿರುತ್ತದೆ. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಇವರು ದಿನಾಂಕ: 20.01.2010 ರಂದು ಪರಿವೀಕ್ಷಣೆ ಮಾಡುವ ಸಂದರ್ಭದಲ್ಲಿ ಬಹಳಷ್ಟು ಪ್ರದೇಶಗಳಲ್ಲಿ ಪ್ರೊಫೈಲ್ ಉಬ್ಬುತಗ್ಗುಗಳಿಂದ ಕೂಡಿರುವುದರಿಂದ ಎತ್ತರ ಭಾಗವನ್ನು ಕತ್ತರಿಸುವ ಮೂಲಕ ಹಾಗೂ ತಗ್ಗು ಪ್ರದೇಶವನ್ನು ತುಂಬಿ ಎಂಬ್ಯಾಕ್‌ಮೆಂಟ್ ಮಾಡುವುದರ ಮೂಲಕ ಈಸ್ ಆಫ್ ಮಾಡಿ ನಂತರದಲ್ಲಿ ರಸ್ತೆ ನಿರ್ಮಾಣ ಮಾಡಲು ಅವಶ್ಯವಾಗಿರುವುದರಿಂದ ಕೆಲವು ಪರಿಮಾಣಗಳಲ್ಲಿ ಹೆಚ್ಚುವರಿಯಾಗಿರುತ್ತದೆ ಹಾಗೂ ಕೆಲವು ಐಟಂಗಳಲ್ಲಿ ಉಳಿತಾಯವಾಗಿರುತ್ತದೆ. ಈ ಹೆಚ್ಚುವರಿ ಮೊತ್ತವು ರೂ. 1,29,34,162.00 ಹಾಗೂ ಉಳಿತಾಯ ಮೊತ್ತ ರೂ. 36,87,631.00, ನಿವ್ವಳ ಹೆಚ್ಚುವರಿ ಮೊತ್ತ ರೂ. 92,46,531.00 ಒಳಗೊಂಡಂತೆ ಪರಿಷ್ಕೃತ ಅಂದಾಜು ಮೊತ್ತ ರೂ. 5,92,46,531.00 ಆಗಿದ್ದು, ಸದರಿ ಪ್ರಸ್ತಾವನೆಗೆ ಆಡಳಿತಾತ್ಮಕ ಮಂಜೂರಾತಿಗೆ ಘಟನೋತ್ತರ ಅನುಮೋದನೆ ಹಾಗೂ ಸದರಿ ಕಾಮಗಾರಿ ನಿರ್ವಹಣೆಯಲ್ಲಿ ಉಂಟಾದ ವರ್ಕ್‌ಸ್ಲಿಪ್ ಮೊತ್ತ ರೂ. 92,46,531.00 ಗಳನ್ನು ಒಳಗೊಂಡಂತೆ ಕಾಮಗಾರಿಯ ಒಟ್ಟು ಮೊತ್ತ ರೂ. 5,92,46,531.00 ಗಳ ಪರಿಷ್ಕೃತ ಅಂದಾಜು ಮೊತ್ತದ ಪ್ರಸ್ತಾವನೆಯನ್ನು ಅನುಮೋದಿಸುವಂತೆ ಕೋರಿರುತ್ತಾರೆ.

ಅದರಂತೆ ಈ ಪ್ರಸ್ತಾವನೆಗೆ ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ಮೊದಲನೇ ಷೆಡ್ಯೂಲ್‌ನ ಐಟಂ 15 ರನ್ವಯ ಸಚಿವ ಸಂಪುಟದ ಅನುಮೋದನೆಯನ್ನು ದಿನಾಂಕ: 3.01.2012 ರಂದು ಪಡೆಯಲಾಗಿದೆ. ಅದರಂತೆ ಈ ಕೆಳಗಿನ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 97 ಸಿಆರ್‌ಎಂ 2010, ದಿನಾಂಕ: 18.02.2012**

**ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭದ ಹಿನ್ನೆಲೆಯಲ್ಲಿ**

i) ಸರ್ಕಾರದ ಆದೇಶ ಸಂ: ಲೋಇ 719 ಸಿಆರ್‌ಎಂ. 2008, ಬೆಂಗಳೂರು ದಿನಾಂಕ: 22.12.2008 ರಲ್ಲಿ ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ಬಾಗಲಕೋಟೆ ಬಿಳಿಗಿರಿರಂಗನಬೆಟ್ಟ ರಸ್ತೆ ಕಿ.ಮೀ. 344.00 ರಿಂದ 351.00 ರವರೆಗೆ ಆಯ್ದ ಭಾಗಗಳಲ್ಲಿ ಅಭಿವೃದ್ಧಿ ಕಾಮಗಾರಿಯ ರೂ. 500 ಲಕ್ಷಗಳ (ಐದು ನೂರು ಲಕ್ಷ ರೂಪಾಯಿಗಳು ಮಾತ್ರ) ಮೊತ್ತದ ಅಂದಾಜಿಗೆ ನೀಡಿರುವ ಆಡಳಿತಾತ್ಮಕ ಮಂಜೂರಾತಿಗೆ ಘಟನೋತ್ತರ ಅನುಮೋದನೆ ನೀಡಲಾಗಿದೆ.

ii) 5054-ಇತರೆ ರಸ್ತೆ ನಿರ್ಮಾಣ ಶೀರ್ಷಿಕೆಯಡಿ ಅನುಮೋದನೆಯಾದ ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು ಬಾಗಲಕೋಟೆ ಬಿಳಿಗಿರಿರಂಗನಬೆಟ್ಟ ರಸ್ತೆ ಕಿ.ಮೀ. 344.00 ರಿಂದ 351.00 ರವರೆಗೆ ಆಯ್ದ ಭಾಗಗಳಲ್ಲಿ ಅಭಿವೃದ್ಧಿ ಕಾಮಗಾರಿಯ ವರ್ಕ್‌ಸ್ಲಿಪ್ ಮೊತ್ತವು ರೂ. 92,46,531.00 ಗಳು (ತೊಂಭತ್ತೆರಡು ಲಕ್ಷ ನಲವತ್ತಾರು ಸಾವಿರದ ಐದು ನೂರ ಮೂವತ್ತೊಂದು ರೂಪಾಯಿಗಳೂ ಮಾತ್ರ) ಒಳಗೊಂಡಂತೆ ಕಾಮಗಾರಿಯ ಒಟ್ಟು ಮೊತ್ತ ರೂ. 5,92,46,531.00 (ಐದು ಕೋಟಿ ತೊಂಭತ್ತೆರಡು ಲಕ್ಷ ನಲವತ್ತಾರು ಸಾವಿರದ ಐದು ನೂರ ಮೂವತ್ತೊಂದು ರೂಪಾಯಿಗಳು ಮಾತ್ರ)ಗಳಾಗಿರುತ್ತದೆ. ಮೂಲ ಮಂಜೂರಾದ ಅಂದಾಜು ಮೊತ್ತ ರೂ. 500 ಲಕ್ಷಗಳಿಗೆ ಹೋಲಿಸಿದಾಗ ಶೇಕಡಾ 19.00 ರಷ್ಟು ಅಧಿಕವಿರುವ ಸದರಿ ವರ್ಕ್‌ಸ್ಲಿಪ್ ಪ್ರಸ್ತಾವನೆಗೆ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಇಲಾಖೆ

(ಸಂಪರ್ಕ)

ಪಿ.ಆರ್. 686

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಎಲ್. ನಾಗೇಂದ್ರ ಪಿ.ಎಸ್.ಐ. ಅರಸೀಕೆರೆ ನಗರ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/ಪಿಆರ್-42/10 (ಓ.ಬಿ. ಸಂಖ್ಯೆ: 08/10) ದಿನಾಂಕ 15.11.2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/68/2010-11 (ಓ.ಬಿ. ಸಂಖ್ಯೆ: 03/2011-12) ದಿನಾಂಕ: 18-4-2011.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 17-7-2011.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)29/2011-12 ದಿನಾಂಕ: 18-9-2011.

**ಪ್ರಸ್ತಾವನೆ :**

ಶ್ರೀ ಬಿ.ಎಲ್. ನಾಗೇಂದ್ರ, ಪಿ.ಎಸ್.ಐ., ಇವರು ಹಾಸನ ಜಿಲ್ಲೆಯ ಅರಸೀಕೆರೆ ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರತರಹದ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಬಿ.ಎಲ್. ನಾಗೇಂದ್ರ, ಪಿ.ಎಸ್.ಐ., ಆದ ನೀವು ಅರಸೀಕೆರೆ ನಗರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸಿರುತ್ತೀರಿ. ನೀವು ಅರಸೀಕೆರೆ ಠಾಣೆ ಮೊ.ಸಂ. 60/2010, ಕಲಂ 420, 408 ಐ.ಪಿ.ಸಿ. ಈ ಪ್ರಕರಣದ ತನಿಖಾಧಿಕಾರಿಯಾಗಿರುತ್ತೀರಿ. ಸದರಿ ಪ್ರಕರಣದ ಆರೋಪಿಗಳನ್ನು ಕೂಡಲೇ ದಸ್ತಗಿರಿ ಮಾಡುವಂತೆ ಉಲ್ಲೇಖ (1)ರಲ್ಲಿ ಕಾಣಿಸಲಾದ ಈ ಕಛೇರಿ ಹಿಂಬರಹದಲ್ಲಿ ಸ್ಪಷ್ಟವಾಗಿ ಆದೇಶಿಸಲಾಗಿತ್ತು. ದಿನಾಂಕ: 11-8-2010 ರಂದು ಮಾನ್ಯ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ರವರು ಅರಸೀಕೆರೆ ನಗರ ಠಾಣೆಯ ಪರಿವೀಕ್ಷಣೆ ನಡೆಸುವಾಗ ಸದರಿ ಪ್ರಕರಣದಲ್ಲಿ ನೀವು ಈ ಕಛೇರಿಯಿಂದ ನೀಡಿದ ಆದೇಶವನ್ನು ಪಾಲಿಸಲು ವಿಫಲರಾಗಿ ಆರೋಪಿಗಳನ್ನು ದಸ್ತಗಿರಿ ಮಾಡದೇ ಇರುವುದನ್ನು ತೀವ್ರವಾಗಿ ಆಕ್ಷೇಪಿಸಿ ನಿಮ್ಮ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವಂತೆ ಉಲ್ಲೇಖ (2)ರಲ್ಲಿ ಕಾಣಿಸಲಾದ ತಮ್ಮ ಅರೆ ಸರ್ಕಾರಿ ಪತ್ರದಲ್ಲಿ ಆದೇಶಿಸಿರುತ್ತಾರೆ. ನೀವೋರ್ವ ಜವಾಬ್ದಾರಿಯುತ ತನಿಖಾಧಿಕಾರಿಯಾಗಿದ್ದು, ಆರೋಪಿಗಳನ್ನು ಬಂಧಿಸದೆ ಈ ಕಛೇರಿಯಿಂದ ನೀಡಲ್ಪಟ್ಟ ಆದೇಶವನ್ನು ಪಾಲಿಸಲು ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 15-11-2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 18–4–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 79 ಪೊಸಿಅ 2011, ಬೆಂಗಳೂರು, ದಿನಾಂಕ: 09.02.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಎಲ್. ನಾಗೇಂದ್ರ, ಪಿಎಸ್.ಐ., ಅರಸೀಕೆರೆ ನಗರ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 687

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದ ಜೀವಾವಧಿ ಶಿಕ್ಷೆಗೊಳಗಾದ ಸನ್ನಡತೆಯುಳ್ಳ ಕೈದಿಗಳಿಗೆ ಘನತೆವೆತ್ತ ರಾಜ್ಯಪಾಲರು ಕ್ಷಮಾದಾನ ಮಾಡಿ ಅಕಾಲಿಕ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರ ಪ್ರಸ್ತಾವನೆ ಸಂಖ್ಯೆ: ಜೆ2 / ಸಿಆರ್–34 / 2010 ದಿನಾಂಕ: 07–02–2011.
2) ಘನತೆವೆತ್ತ ರಾಜ್ಯಪಾಲರ ಆದೇಶ ಸಂಖ್ಯೆ: ಜಿಎಸ್ 229 ದಿನಾಂಕ: 3–9–2011

**ಪ್ರಸ್ತಾವನೆ :**

ರಾಜ್ಯದ ವಿವಿಧ ಕಾರಾಗೃಹಗಳಲ್ಲಿ ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವ ದಿನಾಂಕ: 31–01–2011ಕ್ಕೆ 14 ವರ್ಷ ಶಿಕ್ಷೆ ಪೂರೈಸಿದ ಸಜಾ ಬಂದಿಗಳನ್ನು ಕರ್ನಾಟಕ ಪ್ರಿಸನ್ಸ್ ರೂಲ್ಸ್ 1974ರ ನಿಯಮ 194 ಎ ರನ್ವಯ ಅಕಾಲಿಕ ಬಿಡುಗಡೆ ಮಾಡುವ ಬಗ್ಗೆ ಸ್ಥಾಯಿ ಸಲಹಾ ಮಂಡಳಿಯಿಂದ ಪರಿಶೀಲನೆ ಮಾಡಲ್ಪಟ್ಟು ಕಾರಾಗೃಹಗಳ ಮಹಾನಿರೀಕ್ಷಕರಿಂದ ಮೇಲೆ (1)ರಲ್ಲಿ ಓದಲಾದಂತೆ ಸರ್ಕಾರಕ್ಕೆ ಬಂದ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಶಿಫಾರಸ್ಸು ಮಾಡಲಾಯಿತು.

ಸದರಿ ಪ್ರಸ್ತಾವನೆ ಬಗ್ಗೆ ದಿನಾಂಕ: 18–08–2011ರಂದು ಸಚಿವ ಸಂಪುಟದ ಅನುಮೋದನೆ ಪಡೆದು ಘನತೆವೆತ್ತ ರಾಜ್ಯಪಾಲರಿಗೆ ಭಾರತ ಸಂವಿಧಾನದ ಅನುಚ್ಛೇದ 161 ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಅಕಾಲಿಕ ಬಿಡುಗಡೆ ಮಾಡಲು ಆದೇಶ ಕೋರಲಾಗಿತ್ತು.

ಅಂತಹ ಪ್ರಸ್ತಾವನೆಗಳ ಪೈಕಿ ಘನತೆವೆತ್ತ ರಾಜ್ಯಪಾಲರು ಮೇಲೆ (2)ರಲ್ಲಿ ಓದಲಾದಂತೆ ಅನುಮೋದಿಸಿರುವ ಈ ಕೆಳಗಿನ ಪ್ರಕರಣದ ಬಗ್ಗೆ ಪರಿಶೀಲಿಸಿ ಸರ್ಕಾರವು ಸೂಕ್ತ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 181 ಪಿಆರ್‌ಎ 2011, ಬೆಂಗಳೂರು, ದಿನಾಂಕ: 15.02.2012**

ಮೇಲ್ಕಂಡ ಹಿನ್ನೆಲೆಯಲ್ಲಿ, ಪ್ರಸ್ತುತ ಕೋರಮಂಗಲ ಬಂದೀಖಾನೆಯಲ್ಲಿರುವ ಜೀವಾವಧಿ ಶಿಕ್ಷಾ ಬಂದಿ ಸಂಖ್ಯೆ: 784 ಪುಟ್ಟರಾಜು ಬಿನ್ ರಂಗೇಗೌಡ ಈತನನ್ನು ಕರ್ನಾಟಕ ಪ್ರಿಸನ್ಸ್ ರೂಲ್ಸ್ 1974ರ ನಿಯಮ 194 ಎ ಪ್ರಕಾರ, ಸನ್ನಡತೆಗಾಗಿ ಘನತೆವೆತ್ತ ರಾಜ್ಯಪಾಲರು ಭಾರತ ಸಂವಿಧಾನದ ಅನುಚ್ಛೇದ 161 ರನ್ವಯ ಅನುಮೋದನೆ ಪಡೆದು ಈ ಕೂಡಲೇ ಜಾರಿಗೆ ಬರುವಂತೆ ಅಕಾಲಿಕವಾಗಿ ಬಿಡುಗಡೆ ಮಾಡಲು ಆದೇಶಿಸಿದೆ. ಖೈದಿಯನ್ನು ನಿಯಮಾನುಸಾರ ಬಿಡುಗಡೆ ಮಾಡಿ ಸರ್ಕಾರಕ್ಕೆ ಇಲಾಖೆಯು ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 688

**ಈ. ಪಾಪಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ಒಳಾಡಳಿತ ಸಚಿವಾಲಯ

**ವಿಷಯ :** ಮಾಹಿತಿ ಹಕ್ಕು ಅಧಿನಿಯಮ 2005ರ ಅನುಷ್ಠಾನಕ್ಕಾಗಿ ನೋಡಲ್ ಅಧಿಕಾರಿಯನ್ನು ನೇಮಿಸುವ ಕುರಿತು.

**ಉಲ್ಲೇಖ :** ಸಿಆಸುಇ (ಜನಸ್ಪಂದನ ಕೋಶ–ಮಾಹಿತಿ ಹಕ್ಕು) ಇವರ ಸುತ್ತೋಲೆ ಸಂಖ್ಯೆ:ಸಿಆಸುಇ 18 ಆರ್‌ಟಿಐ 2011, ದಿನಾಂಕ: 03–02–2011.

**.ಸರ್ಕಾರಿ ಆದೇಶ ಸಂಖ್ಯೆ : ಒಇ 06 ಸಶಾಸ 2012, ಬೆಂಗಳೂರು, ದಿನಾಂಕ: 08.02.2012**

ಮಾಹಿತಿ ಹಕ್ಕು ಅಧಿನಿಯಮ 2005ರ ಪರಿಪೂರ್ಣ ಅನುಷ್ಠಾನಕ್ಕಾಗಿ ಒಳಾಡಳಿತ ಇಲಾಖೆಯಲ್ಲಿ ಸರ್ಕಾರದ ಉಪಕಾರ್ಯದರ್ಶಿ (ಪೊಲೀಸ್ ಸಹಾಯಕ ಸೇವೆಗಳು) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೋಡಲ್ ಅಧಿಕಾರಿಯಾಗಿ ನೇಮಿಸಿ ಆದೇಶ ಹೊರಡಿಸಲಾಗಿದೆ. ನೋಡಲ್ ಅಧಿಕಾರಿಯು ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿದೆ.

1) ಇಲಾಖೆಯಲ್ಲಿರುವ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳ/ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಪಟ್ಟಿಯನ್ನು ನಿರ್ವಹಿಸುವಿಕೆಯನ್ನು/ಕಾಲಕಾಲಕ್ಕೆ Up-date ಮಾಡುವಿಕೆಯನ್ನು ದೃಢಪಡಿಸಿಕೊಳ್ಳುವುದು.

2) ಕರ್ನಾಟಕ ಮಾಹಿತಿ ಆಯೋಗಕ್ಕೆ ವಾರ್ಷಿಕ ವರದಿ ತಯಾರಿಸಲು ಬೇಕಾಗುವ ಎಲ್ಲಾ ಮಾಹಿತಿಯನ್ನು ಒದಗಿಸುವುದು.

3) ಮಾಹಿತಿ ಕೋರಿ ಇಲಾಖೆಯಲ್ಲಿ ಸ್ವೀಕೃತವಾಗುವ ಅರ್ಜಿಗಳ ವಿಲೇವಾರಿಯ ಮೇಲ್ವಿಚಾರಣೆ ಮಾಡುವುದು.

4) ಮೊದಲು ಮೇಲ್ಮನವಿ ಪ್ರಾಧಿಕಾರಿಗಳು ಮೇಲ್ಮನವಿಗಳ ವಿಚಾರಣೆಗಾಗಿ ದಿನ ನಿಗದಿಪಡಿಸಿ 30 ದಿನಗಳೊಳಗಾಗಿ ಇತ್ಯರ್ಥಪಡಿಸುವಂತೆ ನೋಡಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಈ. ಪಾಪಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸಮನ್ವಯ)

ಪಿ.ಆರ್. 689

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 350 ಪಿಪಿಇ 2010, ಬೆಂಗಳೂರು ದಿನಾಂಕ: 16–02–2012**

ಸರ್ಕಾರದ ಆದೇಶ ಸಂಖ್ಯೆ: 350 ಪಿಪಿಇ 2010, ದಿನಾಂಕ: 13.12.2011ರಲ್ಲಿನ ಪುಟ ಸಂಖ್ಯೆ: 2, ಕಂಡಿಕೆ–1, ಕ್ರಮಸಂಖ್ಯೆ–2ರಲ್ಲಿನ "ಗೌರಿಬಿದನೂರು" ಎಂಬ ಪದವನ್ನು ತೆಗೆದುಹಾಕಲಾಗಿದೆ. ನಂತರ 2ನೇ ಸಾಲಿನಲ್ಲಿ ಸಂಖ್ಯೆ "12/2008" ಎಂಬುದರ ಬದಲಾಗಿ "12/2010" ಎಂದು ಓದಿಕೊಳ್ಳುವುದು. ಪುಟ ಸಂಖ್ಯೆ 4, ಕಂಡಿಕೆ–1ರ 15ನೇ ಸಾಲಿನಲ್ಲಿ ನಮೂದಿಸಿದ "ಆಪಾದಿತರ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಹಾಗೂ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ" ಎಂಬ ಪದಗಳನ್ನು ತೆಗೆದುಹಾಕಲಾಗಿದೆ. ಪುಟ ಸಂಖ್ಯೆ 4, ಕಂಡಿಕೆ–2 ರ ಕಡೆಯ ಸಾಲಿನಲ್ಲಿ ನಮೂದಿಸಿದ "ಮಾನ್ಯ ಕರ್ನಾಟಕ ಲೋಕಾಯುಕ್ತರು ಇವರಿಗೆ" ಎಂಬ ಪದಗಳನ್ನು ತೆಗೆದುಹಾಕಲಾಗಿದೆ ಹಾಗೂ ಪುಟ ಸಂಖ್ಯೆ 5, ಕಂಡಿಕೆ–2ರ 6ನೇ ಸಾಲಿನಲ್ಲಿ ನಮೂದಿಸಿರುವ "ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು" ಹಾಗೂ 8ನೇ ಸಾಲಿನಲ್ಲಿ ನಮೂದಿಸಿರುವ ಅನುಮತಿ" ಎಂಬ ಪದಗಳನ್ನು ತೆಗೆದುಹಾಕಲಾಗಿದೆ.

ಉಳಿದಂತೆ ಸರ್ಕಾರದ ಆದೇಶ ಸಂಖ್ಯೆ: ಒಇ 350 ಪಿಪಿಇ 2010, ದಿನಾಂಕ 13.12.2011ರಲ್ಲಿ ಇತರೆ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಈ ಮೇಲ್ಕಂಡ ತಿದ್ದುಪಡಿ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 16.02.2012ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

ಪಿ.ಆರ್. 690

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 553 ಪಿಪಿಇ 2011, ಬೆಂಗಳೂರು, ದಿನಾಂಕ: 16.02.2012**

ಸರ್ಕಾರದ ಆದೇಶ ಸಂಖ್ಯೆ: ಒಇ 553 ಪಿಪಿಇ 2011, ದಿನಾಂಕ: 09.01.2012ರ ಪುಟ 1ರ ಪ್ರಸ್ತಾವನೆಯ ಭಾಗದ 2ನೇ ಕಂಡಿಕೆಯ 4ನೇ ಸಾಲಿನ ಅಂತ್ಯದಲ್ಲಿ " ದಾಖಲಾತಿಗಳನ್ನು ಪರಿಶೀಲಿಸಿದೆ" ಎಂಬುದರ ಕೆಳಗೆ, ಕ್ರಮ ಸಂಖ್ಯೆ: 7ರಲ್ಲಿ '(3) ಶ್ರೀ ಬಿ. ದೇವರಾಜಪ್ಪ" ಎಂದಿರುವುದರ ನಂತರ ಈ ಕೆಳಕಂಡ ಸಾಕ್ಷಿದಾರರ ಹೆಸರುಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"(4) ಶ್ರೀ ವಿಜಯ ಹೆಗ್ಡೆ

(5) ಶ್ರೀ ಶ್ರೀಧರ ರಾವ್

(6) ಶ್ರೀ ಎಸ್.ಎಸ್. ಹೆಗಡೆ

(7) ಶ್ರೀ ಬಿ.ಸಿ. ಶೋಭಾ

(8) ಶ್ರೀ ದಿವಾಕರ ಶರ್ಮಾ

(9) ಶ್ರೀ ಶಿವರಾಯ ಬಿಲ್ಲವ

(10) ಶ್ರೀ ದಿವಾಕರ ಜೆ ಸುವರ್ಣ

(11) ಶ್ರೀ ಶ್ರೀಧರ ಜಿ.

(12) ಶ್ರೀ ಉಮೇಶ್

(13) ಶ್ರೀ ಬಿ.ಪಿ. ದಿನೇಶ್ ಕುಮಾರ್"

ಮುಂದುವರೆದು, ಸದರಿ ಸರ್ಕಾರಿ ಆದೇಶದ ಪುಟ 2ರಲ್ಲಿ 2ನೇ ಕಂಡಿಕೆಯ 12ನೇ ಸಾಲಿನಲ್ಲಿ ₹5000–00 ಗಳನ್ನು ಸದರಿ ಸರ್ಕಾರಿ ಕೆಲಸ ಮಾಡಲು ಕೇಳಿ ಪಡೆದ ವೇಳೆಯಲ್ಲಿ ಸಿಕ್ಕಿಹಾಕಿಕೊಂಡಿರುತ್ತಾರೆ" ಎಂದಿರುವುದರ ಬದಲಿಗೆ ₹10000–00 ಲಂಚದ ಹಣ ಕೇಳಿ ಪಡೆದು ಸಿಕ್ಕಿಹಾಕಿಕೊಂಡಿದ್ದು, ಅದರಲ್ಲಿ ₹5000.00 ಗಳ ಲಂಚದ ಹಣವನ್ನು ವಶಪಡಿಸಿಕೊಳ್ಳಲಾಗಿದೆ." ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಸರ್ಕಾರಿ ಆದೇಶ ಸಂ: ಒಇ 553 ಪಿಪಿಇ 2011, ದಿನಾಂಕ: 09.01.2012 ರಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಮೇಲ್ಕಂಡ ತಿದ್ದುಪಡಿ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 16.02.2012ರಂದು ಹೊರಡಿಸಲಾಗಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

ಪಿ.ಆರ್. 691

## HOME SECRETARIAT

**Sub :** Clarificarion on the utilization of Interest amount accrued on the Government funds deposited for various schemes with Karnataka State Police Housing Corporation Limited, Bangalore

**Read :** G.O. No. HD 173 EFS 2010, dated: 22-12-2011

**Preamble :**

In the Government order read above, orders were issued to the effect that the Interest earned on the grants released by the Government to the Karnataka State Police Housing Corporation Limited, Bangalore shall be treated as funds of the Government.

Further clarification regarding the utilization of interest amount accrued on the Government funds deposited for various schemes with Karnataka State Police Housing Corporation Limited, Bangalore is issued as below:-

**GOVERNMENT ORDER NO. HD 173 EFS 2010, Bangalore, Dated: 10-02-2012.**

In continuation of the Government Order read at (1) above, it is further clarified that the interest accrued on Government funds deposited for specific scheme with Karnataka State Police Housing Corporation Limited, Bangalore should be utilized for the same specific scheme and under any circumstances **should not be** diverted or utilized for any other scheme without prior approval of the Government.

By Order and in the name of the Governor of Karnataka,

**B. Rajamma**

Under Secretary to Government,

(Police Expr)

P.R.692

## ಇಂಧನ ಸಚಿವಾಲಯ

**ವಿಷಯ :** ಮೆ: ರೀಜೆನ್ ಪವರ್‌ಟೆಕ್ ಪ್ರೈವೇಟ್ ಲಿಮಿಟೆಡ್ ರವರಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ

**ಓದಲಾಗಿದೆ :**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/RPPL-6 MW/Chitradurga/2011/ 582ದಿನಾಂಕ22.01.2011/11.02.2011, ಕೆಆರ್‌ಇಡಿ/08/ RPPL-6MW/2011/2674 ದಿನಾಂಕ: 08/09.09.2011 ಮತ್ತು ಕೆಆರ್‌ಇಡಿ:08/RPPL-6m\MW/2011/4661 ದಿ: 15/16.12.2011.
2. ದಿನಾಂಕ: 27.05.2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ರೀಜೆನ್ ಪವರ್‌ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿತ್ರದುರ್ಗ ಜಿಲ್ಲೆಯ, ಹೊಳಲ್ಕೆರೆ ತಾಲ್ಲೂಕಿನ ಅಯ್ಯನಹಳ್ಳಿ, ವೀರಭದ್ರಸ್ವಾಮಿ ಗುಡಿ, ಕದುರು ಮತ್ತು ಸಾಸಲು ಪ್ರದೇಶಗಳಲ್ಲಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ನಡವಳಿಯಲ್ಲಿ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ರೀಜೆನ್ ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತಾತ್ಕಾಲಿಕವಾಗಿಯಾದರೂ ಸರ್ವೆ ಸಂಖ್ಯೆಗಳನ್ನು ನೀಡುವ ಷರತ್ತಿಗೊಳಪಟ್ಟು ಹಂಚಿಕೆ ಮಾಡಲು ಸಮಿತಿಯು ಪರಿಗಣಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿದಾರರಿಂದ ಯೋಜನಾ ಸ್ಥಳದ ಸರ್ವೆ ಸಂಖ್ಯೆಗಳನ್ನು ಪಡೆದು ಅಗತ್ಯವಾದ ಅರಣ್ಯ ಇಲಾಖೆಯ ಸಹಮತಿ ಪಡೆಯುವ ಷರತ್ತಿನೊಂದಿಗೆ ಯೋಜನಾ ಹಂಚಿಕೆಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 112 ಎನ್ ಸಿಇ 2011, ಬೆಂಗಳೂರು, ದಿನಾಂಕ: 24.01.2012**

ಮೆ: ರೀಜೆನ್ ಪವರ್‌ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿತ್ರದುರ್ಗ ಜಿಲ್ಲೆಯ, ಹೊಳಲ್ಕೆರೆ ತಾಲ್ಲೂಕಿನ ಅಯ್ಯನಹಳ್ಳಿ, ವೀರಭದ್ರಸ್ವಾಮಿ ಗುಡಿ, ಕದುರು ಮತ್ತು ಸಾಸಲು ಪ್ರದೇಶಗಳಲ್ಲಿ **6.00 ಮೆಗಾ ವ್ಯಾಟ್** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಘಟಕದ ಸ್ಥಾಪನೆಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು **ಹಂಚಿಕೆ** ಮಾಡಿದೆ:–

| Sl. No. | Topo Sheet No. | Proposed capacity MW | Near by villages of the proposed area and district | Geographical area description of the project |
|---|---|---|---|---|
| 1 | 57 B/4 | 6.00 MW (12 Nos x 500 KW) | Kalgatta, Ayyanahalli, Veerabhadraswamy Gudi, Kaduru and Sasalu villages of Holalkere Taluk in Chitradurga District. | The Proposed area is a resized It comprises of non-Contiguous independent hillocks, water bodies and scattered vegetation, independent Rocky Knobs, major portion of area appears to be plain and situated on the Northeast of Chikkayammiganuru and NW of Chikjajur<br>The area held in the following Geographical Co-ordinates:<br>Latitude: $14^0$06'46"-14º 12'13" N<br>Longitude: 76º 05'0"-76º 06'54"E<br>Ridge peaks: 734, 687, 728,799, 670, 647 Amsl. |
| | | 6.00 MW | | |

1. ಯೋಜನೆಯನ್ನು **3 ವರ್ಷದ** ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದ್ದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೋ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳೀ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| **ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ** | **5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ** | **ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ)** |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಈ ಜಮೀನಿನ ಮಾಲೀಕರಿಂದ ಒಪ್ಪಿಗೆ / ಒಡಂಬಡಿಕೆಯನ್ನು ಪಡೆಯತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗುವುದು.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ. ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 693

## ಇಂಧನ ಸಚಿವಾಲಯ

**ವಿಷಯ :** ಮೆ: ಬೃಂದಾವನ್ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರ 24.00 ಮೆಗಾ ವ್ಯಾಟ್ ತುಂಗಾ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** **1**. ಸರ್ಕಾರಿ ಆದೇಶ ಸಂಖ್ಯೆ: ಡಿಇ 154 ಪಿಪಿಸಿ 94 (3) ದಿನಾಂಕ: 6.9.1994.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 336 ಎನ್‌ಸಿಇ 2005 ದಿನಾಂಕ: 10.11.2005.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 68 ಎನ್‌ಸಿಇ 2006 ದಿನಾಂಕ: 6.2.2006.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 407 ಎನ್‌ಸಿಇ 2007 ದಿನಾಂಕ: 16.11.2007.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 499 ಎನ್‌ಸಿಇ 2008 ದಿನಾಂಕ: 03.11.2009.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ ಇಡಿ/06/ಎಸ್ ಹೆಚ್–24/ತುಂಗಾ ಎಂಹೆಚ್‌ಎಸ್/555 ದಿನಾಂಕ: 02/11.02.2011 ಮತ್ತು ಕೆಆರ್‌ಇಡಿ/06/ಎಸ್‌ಹೆಚ್–24/ತುಂಗಾ, ಕಿಜಿವಿ/142 ದಿನಾಂಕ: 13/17.1.2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಎ: ದಾಂಡೇಲಿ ಸ್ಟೀಲ್ ಅಂಡ್ ಫೆರೋ ಅಲಾಯ್ಸ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲ್ಲೂಕಿನ ಗಾಜನೂರು ಗ್ರಾಮದ ತುಂಗಾ ಅಣೆಕಟ್ಟಿನಲ್ಲಿ 20.00 ಮೆಗಾ ವ್ಯಾಟ್ ಸಾಮರ್ಥ್ಯದ ತುಂಗಾ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 1.1.2006 ರಿಂದ 24 ತಿಂಗಳುಗಳ ಅವಧಿಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3)ರ ಆದೇಶದಲ್ಲಿ ಮೆ: ದಾಂಡೇಲಿ ಸ್ಟೀಲ್ ಅಂಡ್ ಫೆರೋ ಅಲಾಯ್ಸ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾದ 20.00 ಮೆಗಾ ವ್ಯಾಟ್ ಸಾಮರ್ಥ್ಯದ ತುಂಗಾ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ: ಬೃಂದಾವನ್ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿಗೆ ವರ್ಗಾಯಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (4)ರ ಆದೇಶದಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 1.1.2008 ರಿಂದ 31.12.2009 ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (5)ರ ಆದೇಶದಲ್ಲಿ ಮೆ: ಬೃಂದಾವನ್ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲ್ಲೂಕಿನ ಗಾಜನೂರು ಗ್ರಾಮದ ತುಂಗಾ ಅಣೆಕಟ್ಟಿನಲ್ಲಿ ಹಂಚಿಕೆಯಾಗಿರುವ 20.00 ಮೆಗಾ ವ್ಯಾಟ್ ಸಾಮರ್ಥ್ಯದ ತುಂಗಾ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 24.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ: 31.12.2010 ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (6)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಯೋಜನೆಯು ಅನುಷ್ಠಾನದ ಹಂತದಲ್ಲಿದ್ದು, ಯೋಜನಾ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಂಕ 31.12.2011 ರವರೆಗೆ ವಿಸ್ತರಿಸುವಂತೆ ದಿನಾಂಕ 02.2.2011ರ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದರು ಈ ಬಗ್ಗೆ ಯೋಜನಾ ಸ್ಥಳ ಪರಿಶೀಲನೆ ಮಾಡಿ ವರದಿ ನೀಡುವಂತೆ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು. ದಿನಾಂಕ: 13.01.2012ರ ಪತ್ರದಲ್ಲಿ ಪ್ರಗತಿ ವರದಿಯನ್ನು ಒದಗಿಸುತ್ತಾ ಮೆ: ಬೃಂದಾವನ್ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ರವರು ಯೋಜನಾ ಅನುಷ್ಠಾನದ ನಿಟ್ಟಿನಲ್ಲಿ ಉತ್ತಮ ಪ್ರಗತಿಯನ್ನು ಸಾಧಿಸಿರುತ್ತಾರೆಂದು ವರದಿ ಮಾಡುತ್ತಾ ಸದರಿ ಯೋಜನೆಯ ಅನುಷ್ಠಾನಕ್ಕೆ ದಿನಾಂಕ 01.1.2011 ರಿಂದ 31.12.2012 ರವರೆಗೆ ಒಟ್ಟು ಎರಡು ವರ್ಷಗಳ ಕಾಲಾವಕಾಶವನ್ನು ವಿಸ್ತರಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 135 ಎನ್‌ಸಿಇ 2011, ಬೆಂಗಳೂರು, ದಿನಾಂಕ: 25.01.2012.**

ಮೆ:: ಬೃಂದಾವನ್ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲ್ಲೂಕಿನ ಗಾಜನೂರು ಗ್ರಾಮದ ತುಂಗಾ ಅಣೆಕಟ್ಟಿನಲ್ಲಿ ಹಂಚಿಕೆಯಾಗಿರುವ 24.00 ಮೆಗಾ ವ್ಯಾಟ್ ಸಾಮರ್ಥ್ಯದ ತುಂಗಾ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು **ದಿನಾಂಕ: 01.1.2011 ರಿಂದ ದಿನಾಂಕ: 31.12.2012 ರವರೆಗೆ ವಿಸ್ತರಿಸಲಾಗಿದೆ.**

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 694

## ಇಂಧನ ಸಚಿವಾಲಯ

**ವಿಷಯ :** ಮೆ: ರೀಜೆನ್ ಪವರ್‌ಟೆಕ್ ಪ್ರೈವೇಟ್ ಲಿಮಿಟೆಡ್ ರವರಿಗೆ 10.50 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/RPPL10.5MW/2011/585/22.01.2011/ 11.02.2011,ಕೆಆರ್‌ಇಡಿ/08/ RPPL ದಿನಾಂಕ-10.50 MW/2011//2575 ದಿನಾಂಕ: 29/30.08.2011 ಮತ್ತುಕೆಆರ್‌ಇಡಿ:08/RPPL10.50/MW/Tumkur/2011/ 4662 ದಿ: 15/16.12.2011.
2. ದಿನಾಂಕ: 27.05.2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ರೀಜೆನ್ ಪವರ್‌ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ತುಮಕೂರು ಜಿಲ್ಲೆಯ, ಮಧುಗಿರಿ ತಾಲ್ಲೂಕಿನ ಮೆಡಿಗಿಸಿ, ನಾಗಲಾಪುರ, ಹನುಮಂತಪುರ, ಮೆಡಗಿಸಿ ಆರ್. ಎಫ್., ಎರನ್ನಬೆಟ್ಟ ಶಂಕರನಬೆಟ್ಟ, ರಾಮದೇವರ ಬೆಟ್ಟ ಮತ್ತು ಗೊಲ್ಲರಹಳ್ಳಿ ಪ್ರದೇಶಗಳಲ್ಲಿ 10.50 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ನಡವಳಿಯಲ್ಲಿ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ರೀಜೆನ್ ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ 10.50 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತಾತ್ಕಾಲಿಕವಾಗಿಯಾದರೂ ಸರ್ವೆ ಸಂಖ್ಯೆಗಳನ್ನು ನೀಡುವ ಷರತ್ತಿಗೊಳಪಟ್ಟು ಹಂಚಿಕೆ ಮಾಡಲು ಸಮಿತಿಯು ಪರಿಗಣಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿದಾರರಿಂದ ಯೋಜನಾ ಸ್ಥಳದ ಸರ್ವೆ ಸಂಖ್ಯೆಗಳನ್ನು ಪಡೆದು ಅಗತ್ಯವಾದ ಅರಣ್ಯ ಇಲಾಖೆಯ ಸಹಮತಿ ಪಡೆಯುವ ಷರತ್ತಿನೊಂದಿಗೆ ಯೋಜನಾ ಹಂಚಿಕೆಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 115 ಎನ್‌ಸಿಇ 2011, ಬೆಂಗಳೂರು, ದಿನಾಂಕ: 24.01.2012.**

ಮೆ: ರೀಜೆನ್ ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ತುಮಕೂರು ಜಿಲ್ಲೆಯ, ಮಧುಗಿರಿ ತಾಲ್ಲೂಕಿನ ಮೆಡಗಿಸಿ, ನಾಗಲಾಪುರ, ಹನುಮಂತಪುರ, ಮೆಡಗಿಸಿ ಆರ್. ಎಫ್., ಎರನ್ನಬೆಟ್ಟ, ಶಂಕರನಬೆಟ್ಟ, ರಾಮದೇವರಬೆಟ್ಟ ಮತ್ತು ಗೊಲ್ಲರಹಳ್ಳಿ ಪ್ರದೇಶಗಳಲ್ಲಿ **10.50 ಮೆಗಾ ವ್ಯಾಟ್** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಘಟಕದ ಸ್ಥಾಪನೆಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು **ಹಂಚಿಕೆ** ಮಾಡಿದೆ:–

| Sl. No. | Topo Sheet No. | Proposed capacity MW | Near by villages of the proposed area and district | Geographical area description of the project |
|---|---|---|---|---|
| 1 | 57 G/1 | 10.5 MW (7 Nos x 1500 KW) | Medigisi, Nagalapura, Hanumanthapura, Medigisi RF, Erannabetta, Shakaranabetta, , Ramadevarabetta, Tippagondanahalli, Ramadevara SF, Channamallanahalli, and, and Gollarahalli villages of Madhugiri Taluk in Tumkur District. | The Proposed area is a mixer of circular independent hillocks, covered with Boulders Rocky knobs and water bodies The entire area is Surrounded by Chinnahalli village and is situated in the Medigisi SF.<br>The area held in the following Geographical Co-ordinates:<br>Latitude: 13º 46'07"- 13º 50'10"N<br>Longitude: 77º 10'51" 77º 15'0" E<br>Ridge peaks: 1039,937,893 728, 722, 783,723 &701 Amsl. |
| | | 10.50 MW | | |

1. ಯೋಜನೆಯನ್ನು **3 ವರ್ಷದ** ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ತಪ್ಪಿದ್ದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೋ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳೀ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| **ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ** | **5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ** | **ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ)** |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಈ ಜಮೀನಿನ ಮಾಲೀಕರಿಂದ ಒಪ್ಪಿಗೆ / ಒಡಂಬಡಿಕೆಯನ್ನು ಪಡೆಯತಕ್ಕದ್ದು.
7. ಅಭಿವೃದ್ಧಿದಾರರರು ಸಂಬಂಧಿಸಿ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗುವುದು.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ. ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 695 ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಮೆ: ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿಮಿಟೆಡ್ ರವರ ಸಹ ವಿದ್ಯುತ್ ಯೋಜನೆಯ ರಫ್ತು (ಎಕ್ಸ್‌ಪೋರ್ಟಬಲ್) ಸಾಮರ್ಥ್ಯವನ್ನು 18 ಮೆ.ವ್ಯಾ ನಿಂದ 20 ಮೆ.ವ್ಯಾ. ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** **1.** ಸರ್ಕಾರಿ ಆದೇಶ ಸಂಖ್ಯೆ: ಡಿಇ 170 ಎನ್‌ಸಿಇ 2000 ದಿನಾಂಕ: 10.5.2001.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 211 ಎನ್‌ಸಿಇ 2006 ದಿನಾಂಕ: 17.8.2006.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ಎಸ್‌ಸಿಎಸ್‌ಎಲ್/ಎಫ್–53/2011–2012/62 ದಿನಾಂಕ: 07/09.1.2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ: ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿಮಿಟೆಡ್ ಇವರಿಗೆ 22 ಮೆಗಾ ವ್ಯಾಟ್ (ಗ್ರಾಸ್) ಮತ್ತು 15 ಮೆಗಾ ವ್ಯಾಟ್ (ಕಬ್ಬು ಅರೆಯುವ ಅವಧಿಯಲ್ಲಿ ಮತ್ತು 18 ಮೆ.ವ್ಯಾ. ಉಳಿಕೆ ಅವಧಿಯಲ್ಲಿ ರಫ್ತು ಮಾಡಲು) ಕಬ್ಬಿನ ಸಿಪ್ಪೆ ಆಧಾರಿತ ಸಹ – ವಿದ್ಯುತ್ ಘಟಕವನ್ನು ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕಿನ, ಭಾರತಿನಗರ (ಕೆ.ಎಂ. ದೊಡ್ಡಿ) ಗ್ರಾಮದಲ್ಲಿ ಸ್ಥಾಪಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ: ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿಮಿಟೆಡ್ ಇವರಿಗೆ 22 ಮೆಗಾ ವ್ಯಾಟ್ (ಗ್ರಾಸ್) ಮತ್ತು 18 ಮೆಗಾ ವ್ಯಾಟ್ ರಫ್ತು (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯವನ್ನು 26 ಮೆಗಾ ವ್ಯಾಟ್ (ಗ್ರಾಸ್) ಮತ್ತು 18 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿಮಿಟೆಡ್ ರವರ ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕಿನ, ಭಾರತಿನಗರ (ಕೆಎಂ.ದೊಡ್ಡಿ) ಗ್ರಾಮದಲ್ಲಿ ಕಬ್ಬಿನ ಸಿಪ್ಪೆ ಆಧಾರಿತ ಸಹ- ವಿದ್ಯುತ್ ಘಟಕದಲ್ಲಿ ಸ್ವಬಳಕೆಯ ಸಾಮರ್ಥ್ಯವನ್ನು ಕಡಿಮೆಗೊಳಿಸಿರುವ ಹಿನ್ನೆಲೆಯಲ್ಲಿ 26 ಮೆ.ವ್ಯಾ (ಗ್ರಾಸ್) ಸಾಮರ್ಥ್ಯದಲ್ಲಿ ರಫ್ತು ಸಾಮರ್ಥ್ಯವನ್ನು 18 ಮೆ.ವ್ಯಾ ನಿಂದ 20 ಮೆ.ವ್ಯಾ ರಫ್ತು (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಹೆಚ್ಚಿಸಲು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 444 ಎನ್‌ಸಿಇ 2011, ಬೆಂಗಳೂರು, ದಿನಾಂಕ: 16.02.2012.**

ಮೆ: ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿಮಿಟೆಡ್ ಇವರ ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕಿನ ಭಾರತಿನಗರ (ಕೆ.ಎಂ.ದೊಡ್ಡಿ) ಗ್ರಾಮದಲ್ಲಿನ ಕಬ್ಬಿನ ಸಿಪ್ಪೆ ಆಧಾರಿತ ಸಹ-ವಿದ್ಯುತ್ ಘಟಕದ 26 ಮೆ.ವ್ಯಾ (ಗ್ರಾಸ್) ಸಾಮರ್ಥ್ಯದಲ್ಲಿ ರಫ್ತು ಸಾಮರ್ಥ್ಯವನ್ನು 18 ಮೆ.ವ್ಯಾ ನಿಂದ 20 ಮೆ.ವ್ಯಾ.ಗೆ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದೊಂದಿಗೆ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವ ಷರತ್ತಿಗೊಳಪಟ್ಟು ಹೆಚ್ಚಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಪತ್ರದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 696

## ಇಂಧನ ಸಚಿವಾಲಯ

**ವಿಷಯ :** ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ವೈಟ್ ಫೀಲ್ಡ್, ಬೆಂಗಳೂರು ಇವರಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವ ಸಂಬಂಧ ಸಹಾಯ ಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 51 ಇಇಬಿ 2001 ದಿನಾಂಕ: 27.4.2001.
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 51 ಇಇಬಿ 2001 ದಿನಾಂಕ: 11.11.2002.
3) ಸರ್ಕಾರಿ ಆದೇಶ ಸಂಖ್ಯೆ: ಇಂಇ 71 ಇಇಬಿ 2003 ದಿನಾಂಕ: 12.9.2003.
4) ಸರ್ಕಾರಿ ಆದೇಶ ಸಂಖ್ಯೆ: ಇಂಇ 71 ಇಇಬಿ 2003 ದಿನಾಂಕ: 23.10.2003.
5) ತಿದ್ದುಪಡಿ ಆದೇಶ ಸಂಖ್ಯೆ: ಇಂಇ 71 ಇಇಬಿ 2003 ದಿನಾಂಕ: 16.12.2003.
6) ಸರ್ಕಾರಿ ಆದೇಶ ಸಂಖ್ಯೆ: ಇಂಇ 74 ಇಇಬಿ 2004 ದಿನಾಂಕ: 9.11.2004.
7) ಸರ್ಕಾರಿ ಆದೇಶ ಸಂಖ್ಯೆ: ಇಂಇ 74 ಇಇಬಿ 2004 ದಿನಾಂಕ: 30.3.2005.
8) ಸರ್ಕಾರಿ ಆದೇಶ ಸಂಖ್ಯೆ: ಇಎನ್ 91 ಇಇಬಿ 2005 (ಪಿ) ದಿನಾಂಕ 19.4.2006.
9) ಸರ್ಕಾರಿ ಆದೇಶ ಸಂಖ್ಯೆ: ಇಎನ್ 91 ಇಇಬಿ 2005 (ಪಿ) ದಿನಾಂಕ: 16.3.2007.
10) ಸರ್ಕಾರಿ ಆದೇಶ ಸಂಖ್ಯೆ: ಇಎನ್ 107 ಇಇಬಿ 2007 ದಿನಾಂಕ: 6.5.2008.
11) ಸರ್ಕಾರಿ ಆದೇಶ ಸಂಖ್ಯೆ: ಇಎನ್ 60 ಇಇಬಿ 2009 ದಿನಾಂಕ: 14.08.2009.
12) ಸರ್ಕಾರಿ ಆದೇಶ ಸಂಖ್ಯೆ: ಇಎನ್ 90 ಇಇಬಿ 2010 ದಿನಾಂಕ: 29.07.2010.
13) ಸರ್ಕಾರಿ ಆದೇಶ ಸಂಖ್ಯೆ: ಇಎನ್ 46 ಇಇಬಿ 2011 ದಿನಾಂಕ: 28.03.2011.
14) ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಪತ್ರ ಸಂಖ್ಯೆ: ಉಪ್ರವ್ಯ (ಕಂ&ಮೇ)/ಬಿಸಿ27/2457/11-12/723-27 ದಿನಾಂಕ: 19.01.2012.

**ಪ್ರಸ್ತಾವನೆ :**

ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ ವಿದ್ಯುತ್ ಪೂರೈಕೆಯನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತವು ಮಾಡಿರುವ ಸಂಬಂಧ ಮೇಲೆ ಓದಲಾದ ಕ್ರಮಾಂಕ (1) ರಿಂದ (13) ರವರೆಗೆ 2001 ನೇ ಸಾಲಿನಿಂದ ಬಿಡುಗಡೆ ಮಾಡಿರುವ ಸಹಾಯಧನ ವಿವರಗಳು ಈ ಕೆಳಗಿನಂತಿವೆ:-

| ಕ್ರಮ ಸಂಖ್ಯೆ | ಸರ್ಕಾರಿ ಆದೇಶ ಸಂಖ್ಯೆ | ದಿನಾಂಕ | ಆರ್ಥಿಕ ವರ್ಷ | ಮೊತ್ತ (₹ಕೋಟಿಗಳಲ್ಲಿ) |
|---|---|---|---|---|
| 1 | ಡಿಇ 51 ಇಇಬಿ 2001 | 27.4.2001 | 2001-2002 | 2.00 |
| 2 | ಡಿಇ 51 ಇಇಬಿ 2001 | 11.11.2002 | 2002-2003 | 2.00 |
| 3 | ಡಿಇ 71 ಇಇಬಿ 2003 | 23.10.2003 | 2003-2004 | 2.00 |
| 4 | ಡಿಇ 71 ಇಇಬಿ 2003 | 9.11.2004 | 2004-2005 | 1.00 |
| 5 | ಡಿಇ 71 ಇಇಬಿ 2003 | 30.3.2005 | 2004-2005 | 0.80 |

| | | | | |
|---|---|---|---|---|
| 6 | ಡಿಇ 91 ಇಇಬಿ 2003(ಪಿ) | 19.4.2006 | 2005–2006 | 1.15 |
| 7 | ಇಎನ್ 91 ಇಇಬಿ 2005(ಪಿ) | 16.3.2007 | 2006–2007 | 2.00 |
| 8 | ಇಎನ್ 107 ಇಇಬಿ 2007 | 6.5.2008 | 2008–2009 | 2.00 |
| 9 | ಇಎನ್ 60 ಇಇಬಿ 2009 | 14.8.2009 | 2009–2010 | 1.65 |
| 10 | ಇಎನ್ 90 ಇಇಬಿ 2010 | 29.07.2010 | 2010–2011 | 1.80 |
| 11 | ಇಎನ್ 46 ಇಇಬಿ 2011 | 28.3.2011 | 2011–2012 | 0.20 |
| | | | ಒಟ್ಟು | 16.60 |

ಮೇಲೆ ಓದಲಾದ ಕ್ರಮಾಂಕ (14)ರ ಪತ್ರದಲ್ಲಿ ಮುಖ್ಯ ಪ್ರಧಾನ ವ್ಯವಸ್ಥಾಪಕರು (ಹ&ವಾ), ಬೆಸ್ಕಾಂ ರವರು ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ವೈಟ್ ಫೀಲ್ಡ್, ಬೆಂಗಳೂರು ರವರ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡಿದ್ದು, ಏಪ್ರಿಲ್ 2011 ರಿಂದ ಜನವರಿ 2012ರ ಅಂತ್ಯಕ್ಕೆ ಒಟ್ಟು ವಿದ್ಯುತ್ ಬಾಕಿ ₹3,38,00,000/– ಗಳಷ್ಟಿದ್ದು, ಈ ಮೊತ್ತವನ್ನು ಸರ್ಕಾರದ ವತಿಯಿಂದ ಪಾವತಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 46 ಇಇಬಿ 2011, ಬೆಂಗಳೂರು, ದಿನಾಂಕ: 18.02.2012.**

ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ವೈಟ್‌ಫೀಲ್ಡ್, ಬೆಂಗಳೂರು ಇವರಿಗೆ 2011–12ನೇ ಸಾಲಿಗೆ ವಿದ್ಯುತ್ ಪೂರೈಕೆ ಮಾಡಿರುವ ಸಂಬಂಧ ವಾರ್ಷಿಕ ಗರಿಷ್ಠ ಮೊತ್ತ ₹2.00 ಕೋಟಿಗಳನ್ನು 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ ' 2801–80–101–1–04–106 (ಯೋಜನೇತರ)' ರಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇವರು ಹಣಸಂದಾಯ ರಶೀದಿಗೆ (Payees Receipt) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲುರುಜುವನ್ನು ಪಡೆದುಕೊಳ್ಳತಕ್ಕದ್ದು ಹಾಗೂ ಈ ಬಗ್ಗೆ ಸರಿಯಾದ ಲೆಕ್ಕ ತಃಖ್ತೆಯನ್ನು ಇಟ್ಟುಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 112 Exp-I/2011 ದಿನಾಂಕ: 09.02.2012ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 697

## HEALTH & FAMILY WELFARE SECRETARIAT

**Sub :** Hiring of Procurement Consultant under KHSDRP- continuation -reg.

**Read :**
**1.** Govt. Order No. HFW/KHSDRP/Sect-14/2007, dt: 26.11.2007.
**2.** Govt. Order No. HFW/KHSDRP/Sect-14/2007, dt: 20.02.2009.
**3.** Govt. Order No. HFW/KHSDRP/Sect-14/2007, dt: 24.12.2009.
**4.** Govt. Order No. HFW/KHSDRP/Sect-14/2007, dt: 17.03.2011.
**5.** E-mail of the World Bank dt: 09.12.2011.

**Preamble :**

In the Government order read at (1) above, Sri K.N. Venkataraman was appointed as a part-time Procurement Cousultant for Karnataka Health System Development and Reform Project (KHSDRP) initially for a period of one year from 28.11.2007 to 27.11.2008.

In the Government Order at (2) and (3) above, his tenure was extended for two years (from 28.11.2008 to 27.11.2009 and from 28.11.2009 to 27.11.2010) for KHSDRP, National Rural Health Mission (NRHM) and Karnataka State Drug Logistics and Warehousing Society (KSDL &WS) as per the decision of the Programme Steering Committee.

In the Government Order read at (4) above, his services were extended for one more year from 28.11.2010 with an enhanced remuneration of Rs. 4,000-00 for half day and Rs. 7,000-00 for full day subject to ceiling limit of Rs. 70,000-00 per month. The contract period has expired on 27.11.2011.

The consultant has been effectively monitoring and guiding the procurement activities taken up under the Project. He is also participating in the discussion with the World Bank/Project during Mission visits. He is giving his expert opinion on all important procurement issues. His services are found necessary for the Project. The Consultant has submitted a representation and requested for extension of the contract period. The World Bank has also conveyed its 'no objection' vide e - mail read at (5) above.

The Secretary, Health and Family Welfare Department and Chairman, Programme Steering Committee had approved the Proposal on file subject to ratification by the PSC.

Hence, the following order.

**GOVERNMENT ORDER NO. HFW/KHSDRP/Sect-14/2007 BANGALORE, DATED 10.02.2012**

Under the circumstances explained in the preamble, Government are pleased to continue the services of Sri K.N. Venkataraman as part - time Procurement Consultant for KHSDRP, NRHM and KSDL&WS with a remuneration of Rs. 4,000-00 (Rupees four thousand only) for half day and Rs. 7,000-00 (Rupees seven thousand only) for full day subject to ceiling limit of

Rs. 70,000-00 (Rupees seventy thousand only) per month, for a period of one year or till the end of the Project period whichever is earlier.

The Consultant shall execute a fresh contract agreement containing Terms of Reference. The Consultant is bound by the Terms of Reference that are part of the Contract Agreement.

The expenditure towards his consultancy shall be debited under the budget head"2210-06-800-0-84-051 (General Expenses) during the contract period.

By Order and in the name of the Governor of Karnataka,
**K.N. Ramesh**
Deputy Secretary to Government, (I/c)
Health & Family Welfare Dept.
KHSDRP

P.R.698

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಔಷಧಿ ಗಿಡಮೂಲಿಕಾ ಪ್ರಾಧಿಕಾರದ ಆಡಳಿತ ಮಂಡಳಿಯ ಅವಧಿಯನ್ನು ದಿನಾಂಕ: 31–3–2012ರ ವರೆಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 50 ಎಫ್‌ಪಿಸಿ 2009 ದಿನಾಂಕ: 06–1–2010.
2) ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ರವರ ಪತ್ರ ಸಂ. ಕಂಪ:ಆಮಂ/2011–12 ದಿನಾಂಕ: 3–2–2012.

**ಪ್ರಸ್ತಾವನೆ :**

ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ರಾಜ್ಯ ಔಷಧಿ ಗಿಡಮೂಲಿಕಾ ಪ್ರಾಧಿಕಾರದ ಆಡಳಿತ ಮಂಡಳಿಯನ್ನು ರಚಿಸಿ, ಸದರಿ ಆದೇಶದ ಪ್ರಕಾರ ಆಡಳಿತ ಮಂಡಳಿಯ ಅಧಿಕಾರದ ಅವಧಿಯು 2 ವರ್ಷವಾಗಿದ್ದು, ದಿನಾಂಕ: 6–1–2012 ಕ್ಕೆ ಮುಗಿದಿರುತ್ತದೆ. ಈ ಆಡಳಿತ ಮಂಡಳಿಯ ಮೊದಲನೇ ಸಭೆಯು ದಿನಾಂಕ: 20–5–2010 ರಂದು ನಡೆದಿರುತ್ತದೆ.

ಮೇಲೆ ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ: 3–2–2012ರ ಪತ್ರದಲ್ಲಿ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ರವರು ಕರ್ನಾಟಕ ರಾಜ್ಯ ಔಷಧಿ ಗಿಡಮೂಲಿಕಾ ಪ್ರಾಧಿಕಾರದ ಮೆಮೋರೆಂಡಮ್ ಆಫ್ ಅಸೋಸಿಯೇಷನ್ ಪ್ರಕಾರ ಆಡಳಿತ ಮಂಡಳಿಯ ಸಭೆಯ ದಿನಾಂಕ 21–1–2012 ರಂದು ಜರುಗಿದ್ದು ಸದರಿ ಸಭೆಯಲ್ಲಿ ತಗೆದುಕೊಂಡ ನಿರ್ಣಯದಂತೆ ಆಡಳಿತ ಮಂಡಳಿಯ ಅಧಿಕಾರದ ಅವಧಿಯನ್ನು ದಿನಾಂಕ: 6–1–2012 ರಿಂದ 31–3–2012ರವರೆಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಪ್ರಸ್ತಾಪಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 12 ಎಫ್‌ಪಿಸಿ 2012, ಬೆಂಗಳೂರು, ದಿನಾಂಕ: 14.02.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಔಷಧಿ ಗಿಡಮೂಲಿಕಾ ಪ್ರಾಧಿಕಾರದ ಆಡಳಿತ ಮಂಡಳಿಯು ಅಧಿಕಾರದ ಅವಧಿಯನ್ನು ದಿನಾಂಕ: 6–1–2012 ರಿಂದ 31–3–2012 ರವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 699

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ಹುದ್ದೆಗಳನ್ನು ಸೃಜಿಸಿ ವೃಂದ ಬಲವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಪತ್ರ ಸಂಖ್ಯೆ: ಮಾನಿಮ/15/ಅಡಎ–08/565, ದಿನಾಂಕ: 24–11–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿನ ಸರ್ಕಾರದ ಆದೇಶದಲ್ಲಿ ದಿನಾಂಕ:23–8–2011 ರಂದು ನಡೆದ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ 181ನೇ ಸಭೆಯಲ್ಲಿ ತೀರ್ಮಾನಿಸಿದಂತೆ, ಮಂಡಳಿಯ ಕಾರ್ಯಕಲಾಪಗಳನ್ನು ಸುಗಮವಾಗಿ ನಿರ್ವಹಿಸುವ ಆಡಳಿತಾತ್ಮಕ ಹಿತದೃಷ್ಟಿಯಿಂದ ಈ ಕೆಳಕಂಡ ವೃಂದದ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲು ಸರ್ಕಾರದ ಅನುಮೋದನೆಯನ್ನು ಕೋರಲಾಗಿದೆ.

| **ಹುದ್ದೆಯ ವಿವರ** | **ಪ್ರಸ್ತುತ ಹುದ್ದೆ** | **ಹೊಸದಾಗಿ ಸೃಜಿಸಲಾಗಿರುವ ಹುದ್ದೆ** |
|---|---|---|
| ಸಹಾಯಕ ಕಾರ್ಯಪಾಲಕ ಅಭಿಯಂತರರು (ಸಿವಿಲ್) | 0 | 02 |
| ಹಿರಿಯ ಪರಿಸರ ಅಧಿಕಾರಿ | 02 | 02 |
| ಸಹಾಯಕ ಆಡಳಿತಾಧಿಕಾರಿ | 09 | 11 |
| ಚಾಲಕ | 10 | 05 |
| ಚಾಲಕ ಗ್ರೇಡ್ –ಬಿ | 09 | 04 |
| ಚಾಲಕ ಗ್ರೇಡ್ –ಎ | 03 | 01 |
| ಒಟ್ಟು | 33 | 25 |

ಸದರಿ ಪ್ರಸ್ತಾವನೆಯನ್ನು ನಿಯಮಾನುಸಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 153 ಇಪಿಸಿ 2011, ಬೆಂಗಳೂರು, ದಿನಾಂಕ: 22.02.2012.**

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಕಾರ್ಯಕಲಾಪಗಳನ್ನು ಸುಗಮವಾಗಿ ನಿರ್ವಹಿಸುವ ಆಡಳಿತಾತ್ಮಕ ಹಿತದೃಷ್ಟಿಯಿಂದ ಹಿರಿಯ ಪರಿಸರ ಅಧಿಕಾರಿ ಹುದ್ದೆಗಳನ್ನು ಹೆಚ್ಚುವರಿ ಸೃಜಿಸುವುದನ್ನು ಹೊರತುಪಡಿಸಿ, ಈ ಕೆಳಕಂಡ ವೃಂದದ ಹುದ್ದೆಗಳನ್ನು ಮಾತ್ರ ಹೆಚ್ಚುವರಿಯಾಗಿ ಸೃಜಿಸಲು ಸರ್ಕಾರದ ಆದೇಶ ಸಂಖ್ಯೆ: ಅಪಜೀ 7 ಇಪಿಸಿ 2010, ದಿನಾಂಕ: 30–09–2010ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ.

| **ಹುದ್ದೆಯ ವಿವರ** | **ಪ್ರಸ್ತುತ ಹುದ್ದೆ** | **ಹೊಸದಾಗಿ ಸೃಜಿಸಲಾಗಿರುವ ಹುದ್ದೆ** |
|---|---|---|
| ಸಹಾಯಕ ಕಾರ್ಯಪಾಲಕ ಅಭಿಯಂತರರು (ಸಿವಿಲ್) | 0 | 02 |
| ಸಹಾಯಕ ಆಡಳಿತಾಧಿಕಾರಿ | 09 | 11 |
| ಚಾಲಕ | 10 | 05 |
| ಚಾಲಕ ಗ್ರೇಡ್ –ಬಿ | 09 | 04 |
| ಚಾಲಕ ಗ್ರೇಡ್ –ಎ | 03 | 01 |
| ಒಟ್ಟು | 33 | 23 |

ಸರ್ಕಾರದ ಆದೇಶ ಸಂಖ್ಯೆ: ಅಪಜೀ 54 ಇಪಿಸಿ 2009, ದಿನಾಂಕ: 04–05–2010ರಲ್ಲಿ ಹಾಗೂ ಸದರಿ ಆದೇಶದಲ್ಲಿ ಹೆಚ್ಚುವರಿಯಾಗಿ ಸೃಜಿಸಲಾಗಿರುವ ಎಲ್ಲಾ ಹುದ್ದೆಗಳಿಂದ ಉಂಟಾಗುವ ವೃಂದ ಬಲವನ್ನು ಸರಿಪಡಿಸಿಕೊಳ್ಳುವ ಹಿನ್ನೆಲೆಯಲ್ಲಿ ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ನಿಯಮಾನುಸಾರ ತಿದ್ದುಪಡಿ ಆದೇಶವನ್ನು ಹೊರಡಿಸತಕ್ಕದ್ದು.

ಸದರಿ ಹುದ್ದೆಗಳ ಸೃಜನೆಯಿಂದ ಉಂಟಾಗುವ ವೆಚ್ಚವನ್ನು ಮಂಡಳಿಯ ಸ್ವಂತ ಅನುದಾನದಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಪಿ.ಚಂದ್ರಹಾಸ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 700 ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಸುಧಾಕರ್, ಎ.ಪಂಡಿತ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಅಪರ ನಿಬಂಧಕರ (ವಿಚಾರಣೆಗಳು) ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವುದರ ಷರತ್ತು ಮತ್ತು ನಿಬಂಧನೆಗಳು.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 116 ಸೇಲೋಯ 2011 ದಿನಾಂಕ: 26–08–2011.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ದಿನಾಂಕ: 26–08–2011ರ ಅಧಿಸೂಚನೆಯಲ್ಲಿ ಶ್ರೀ ಸುಧಾಕರ್, ಎ.ಪಂಡಿತ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಅಪರ ನಿಬಂಧಕ (ವಿಚಾರಣೆಗಳು) ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಲಾಗಿದ್ದು ಇವರ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 116 ಸೇಲೋಯ 2011 ಬೆಂಗಳೂರು, ದಿನಾಂಕ: 25–02–2012**

ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿರುವ ಅಪರ ನಿಬಂಧಕರು (ವಿಚಾರಣೆಗಳು) ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇಲೆ ದಿನಾಂಕ 11–08–2011 ರಿಂದ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಸುಧಾಕರ್, ಎ.ಪಂಡಿತ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತಿರುತ್ತವೆ:

1. ಶ್ರೀ ಸುಧಾಕರ್, ಎ.ಪಂಡಿತ್ ರವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ 11–08–2011 ರಿಂದ ಒಂದು ವರ್ಷದ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಸುಧಾಕರ್, ಎ.ಪಂಡಿತ್ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 23,040/– ಮರುನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಇವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನದ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಇವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಈ ಅಧಿಕಾರಿಯವರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

4. ಈ ಅಧಿಕಾರಿಯವರು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ಸ್. ನಿಯಮ 150 ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಈ ಅಧಿಕಾರಿಯವರು ಅರ್ಹರಾಗಿರುವುದಿಲ್ಲ.
6. ಸದರಿ ಅಧಿಕಾರಿಯವರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರುನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟು ಮಾಡಿದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಅವರು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50–00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ಅಧಿಕಾರಿಯವರಿಂದ ಬರೆಯಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 138 ಸೇ–3/12 ದಿನಾಂಕ: 13–02–2012 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 704

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ವಿ.ಬಿ. ದಾಮಣ್ಣವರ್, ಕೆ.ಎ.ಎಸ್. (ಕಿರಿಯ ಶ್ರೇಣಿ), ಸಹಾಯಕ ಆಯುಕ್ತರು, ಬೈಲಹೊಂಗಲ ಉಪವಿಭಾಗ, ಇವರ ವಿರುದ್ಧ ಇಲಾಖಾ ವಿಚಾರಣೆ–ಅಮಾನತ್ತಿನಲ್ಲಿ ಇಡುವ ಬಗ್ಗೆ.

**ಓದಲಾಗಿದೆ :** 1. ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂಶಾ/ಕೆಎಲ್/ಆರ್/ ಸಿಆರ್/127/2011–12 ದಿನಾಂಕ: 21–02–2012.

2. ಕಂದಾಯ ಇಲಾಖೆಯ ಕಡತ ಸಂಖ್ಯೆ: RD 73 BMM 2012.

**ಪ್ರಸ್ತಾವನೆ :**

ಈ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ಇವರ ಪತ್ರದಲ್ಲಿನ ವರದಿ ಹಾಗೂ ಕಂದಾಯ ಇಲಾಖೆಯ ಕಡತದಲ್ಲಿನ ಶಿಫಾರಸ್ಸನ್ನು ಪರಿಶೀಲಿಸಿದಾಗ ಶ್ರೀ ವಿ.ಬಿ. ದಾಮಣ್ಣವರ್, ಸಹಾಯಕ ಆಯುಕ್ತರು, ಬೈಲಹೊಂಗಲ, ಉಪವಿಭಾಗ ಇವರು ನ್ಯಾಯಾಲಯವು ರಿಟ್ ಪಿಟಿಷನ್ ಸಂಖ್ಯೆ: 202/1995 ರಲ್ಲಿ ನೀಡಿರುವ ನಿರ್ದೇಶನವನ್ನು ಪರಿಗಣನೆಗೆ ತೆಗೆದುಕೊಳ್ಳದೇ ಕರ್ನಾಟಕ ಭೂ ಸುಧಾರಣೆ ಕಾಯ್ದೆಯ ಕಲಂ 66 ನ್ನು ಹಾಗೂ ಅರಣ್ಯ (ಸಂರಕ್ಷಣೆ) ಕಾಯ್ದೆ 1980 ರಲ್ಲಿನ ನಿಯಮಗಳನ್ನು ಉಲ್ಲಂಘಿಸಿ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಬೈಲಹೊಂಗಲ ತಾಲ್ಲೂಕಿನ ಕುಲವಳ್ಳಿ ಗ್ರಾಮದ 2,553 ಎಕರೆ 35 ಗುಂಟೆ ಜಮೀನನ್ನು ಕೇವಲ 4 ಜನ ಅರ್ಜಿದಾರರಿಗೆ ದಿನಾಂಕ: 05–12–2011 ರಂದು ಭೂ ನ್ಯಾಯ ಮಂಡಳಿಯಿಂದ ಮಂಜೂರು ಮಾಡಿ, ಈ ಜಮೀನಿನ ಹಕ್ಕು ಬದಲಾವಣೆ ಮಾಡಲು ಕಾರಣಕರ್ತರಾಗಿ, ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ಕರ್ತವ್ಯಚ್ಯುತಿ ಎಸಗಿ ಸರ್ಕಾರಕ್ಕೆ ವಂಚನೆ ಮಾಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

ಆದ್ದರಿಂದ ಸರ್ಕಾರವು ಶ್ರೀ ವಿ.ಬಿ. ದಾಮಣ್ಣವರ್, ಕೆ.ಎ.ಎಸ್. (ಕಿರಿಯ ಶ್ರೇಣಿ), ಅಧಿಕಾರಿ, ಸಹಾಯಕ ಆಯುಕ್ತರು, ಬೈಲಹೊಂಗಲ ಉಪವಿಭಾಗ, ಬೈಲಹೊಂಗಲ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಹೂಡಲು ನಿರ್ಧರಿಸಿ, ಆಪಾದಿತ ಅಧಿಕಾರಿಯು ದಾಖಲೆಗಳನ್ನು ಹಾಗೂ ಸಾಕ್ಷಾಧಾರಗಳನ್ನು ತಿದ್ದುವ ಸಾಧ್ಯತೆಯನ್ನು ತಪ್ಪಿಸಲು ಮತ್ತು ಪ್ರಕರಣದ ಸುಗಮ ವಿಚಾರಣೆಗೆ ಅವಕಾಶಕಲ್ಪಿಸುವ ದೃಷ್ಟಿಯಿಂದಾಗಿ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 16 ಕೆಇವಿ 2012 ಬೆಂಗಳೂರು, ದಿನಾಂಕ : 25ನೇ ಫೆಬ್ರವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 10 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ವಿ.ಬಿ. ದಾಮಣ್ಣವರ್, ಕೆ.ಎ.ಎಸ್. (ಕಿರಿಯ

ಶ್ರೇಣಿ), ಅಧಿಕಾರಿ, ಪ್ರಸ್ತುತ ಸಹಾಯಕ ಆಯುಕ್ತರು, ಬೈಲಹೊಂಗಲ ಉಪವಿಭಾಗ, ಬೈಲಹೊಂಗಲ, ಬೆಳಗಾಂ ಜಿಲ್ಲೆ, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವಿ.ಬಿ. ದಾಮಣ್ಣವರ್, ಕೆ.ಎ.ಎಸ್. (ಕಿರಿಯ ಶ್ರೇಣಿ), ಅಧಿಕಾರಿ, ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರಂತೆ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಡಗಾವೆ ಬಸವರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 705 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–2)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ತಿದ್ದುಪಡಿ**

ಸಂಖ್ಯೆ: ಪಿಡಿ 14 ಇವಿಎನ್ 2012, ಬೆಂಗಳೂರು, ದಿನಾಂಕ: 25–02–2012.

ಸರ್ಕಾರದ ಆದೇಶ ಸಂಖ್ಯೆ: ಪಿಡಿ 8 ಇವಿಎನ್ (2) 2011, ದಿನಾಂಕ: 11–07–2011ರಲ್ಲಿ ಚಾಲಕರ ಹುದ್ದೆಯ ವೇತನ ಶ್ರೇಣಿ "ರೂ. 4800–7275" ಎಂದು ಆದೇಶಿಸಿದ್ದು ಅದರ ಬದಲಿಗೆ ವೇತನ ಶ್ರೇಣಿ "ರೂ. 5800–10500" ಎಂದು ಓದಿಕೊಳ್ಳತಕ್ಕದ್ದು.

**ಎಂ.ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ–1 ಮತ್ತು 2,

ಪಿ.ಆರ್. 706 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಎ.ಆರ್. ರಾಜೇಶ್, ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮೇಲೂರು, ಕೆ.ಆರ್. ನಗರ ತಾಲ್ಲೂಕು ಮೈಸೂರು ಜಿಲ್ಲೆ ಇವರ ಹಿಂದಿನ ಸೇವೆಯನ್ನು ಅರ್ಹತಾದಾಯಕ ಸೇವೆ ಎಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ: ಪಪೂಶಿಇ/ಸಿಬ್ಬಂದಿ–3/ಎನ್ಎನ್/ಅಸೇಪ–2/2010–11 ದಿನಾಂಕ: 20–10–2011.

**ಪ್ರಸ್ತಾವನೆ :**

ಶ್ರೀ ಎ.ಆರ್. ರಾಜೇಶ್, ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮೇಲೂರು, ಕೆ.ಆರ್. ನಗರ ತಾಲ್ಲೂಕು ಮೈಸೂರು ಜಿಲ್ಲೆ ಇವರು ಈ ಹಿಂದೆ ದಿನಾಂಕ: 01–06–1999 ರಿಂದ 06–10–2009 ರ ವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪ್ರೌಢಶಾಲಾ ಸಹಾಶಿಕ್ಷಕರ ಹುದ್ದೆಯಲ್ಲಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 224–ಎ ರನ್ವಯ ಪ್ರಸಕ್ತ ಸೇವೆಯ ನಿವೃತ್ತಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮಾಡಿರುವ ಶಿಫಾರಸ್ಸಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 348 ಡಿಜಿಡಿ 2011, ಬೆಂಗಳೂರು, ದಿನಾಂಕ : 23ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ಎ.ಆರ್. ರಾಜೇಶ್, ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮೇಲೂರು, ಕೆ.ಆರ್. ನಗರ ತಾಲ್ಲೂಕು ಮೈಸೂರು ಜಿಲ್ಲೆ ಇವರು ಪ್ರಸ್ತುತ ಸೇವೆಗೆ ಸೇರುವ ಮುನ್ನ ದಿನಾಂಕ: 01–06–1999 ರಿಂದ 06–10–2009ರ ವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪ್ರೌಢಶಾಲಾ ಸಹಶಿಕ್ಷಕರಾಗಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 224–ಎ ರನ್ವಯ ಪ್ರಸ್ತುತ ಸೇವೆಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಹೆಚ್. ಕುರಿಯವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 707 ಶಿಕ್ಷಣ ಇಲಾಖೆ (ಪದವಿಪೂರ್ವ)

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರಿ ಜಿ.ಹೆಚ್. ಕಟ್ಟೀಮನಿ, ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಮತ್ತು ಶ್ರೀ ಕೆ.ಎಸ್. ಪ್ರಕಾಶ್, ಪ್ರಥಮ ದರ್ಜೆ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರುಗಳ ವಿರುದ್ಧದ ಜಂಟೀ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** Additional Registrar of Enquiries-8, Karnataka Lokayukta ಇವರ ಪತ್ರ ಸಂಖ್ಯೆ: Compt/Uplok/BD/107/2009/ARE-8, Dated: 06-02-2012.

**ಪ್ರಸ್ತಾವನೆ :**

ಅಪರ ನಿಬಂಧಕರು ವಿಚಾರಣೆಗಳು–8, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದೊಂದಿಗೆ, ಶ್ರಿ ಜಿ.ಹೆಚ್. ಕಟ್ಟೀಮನಿ, ಇವರು ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ ಹುದ್ದೆಯಲ್ಲಿ ಮತ್ತು ಶ್ರೀ ಕೆ.ಎಸ್. ಪ್ರಕಾಶ್, ಇವರು ಪ್ರಥಮ

ದರ್ಜೆ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರುಗಳು (ಆರೋಪಿತರು) ದಿನಾಂಕ: 29–11–2007 ರಂದು ಸರ್ಕಾರಿ ಪದವಿ ಪೂರ್ವ ಕಾಲೇಜು, ಕಾಶೀಪುರ, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇಲ್ಲಿಗೆ ಅನಿರೀಕ್ಷಿತ ಭೇಟಿ ನೀಡಿ ಸಿಬ್ಬಂದಿಗಳ ಹಾಜರಾತಿ ಬಗ್ಗೆ ಪರಿಶೀಲನೆ ಮಾಡಿದ್ದು, ಇನ್ನಿತರೆ ಸಿಬ್ಬಂದಿಯು ಸೇರಿದಂತೆ ಶ್ರೀ ಕೆ. ನಾಗರಾಜ್, ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕಾಶೀಪುರ, ಹೊಳಲ್ಕೆರೆ ತಾಲ್ಲೂಕು ರವರು ಗೈರುಹಾಜರಾಗಿದ್ದ ಬಗ್ಗೆ ದಿನಾಂಕ: 30–11–2007 ರಂದು ಕಾರಣ ಕೇಳುವ ನೋಟೀಸು ನೀಡಿದ್ದು. ಇದಕ್ಕೆ ದಿನಾಂಕ: 10–12–2007 ರಂದು ನೀಡಿದ ಸಮಜಾಯಿಷಿ ಪತ್ರವನ್ನು ಪರಿಗಣಿಸದೇ, ಗೈರು ಹಾಜರಾದ ದಿನಕ್ಕೆ ವೇತನ ತಡೆಹಿಡಿಯಲು ಸದರಿ ಕಾಲೇಜಿನ ಪ್ರಾಚಾರ್ಯರಿಗೆ ಆರೋಪಿತರ ಕಛೇರಿಯಿಂದ ದಿನಾಂಕ: 05–01–2008 ರಂದು ಪತ್ರ ಬರೆಯಲಾಗಿದೆ. ಸಮಜಾಯಿಷಿಯನ್ನು ಪರಿಗಣಿಸದಿರುವ ಬಗ್ಗೆ ಶ್ರೀ ನಾಗರಾಜ್ ರವರು ದಿನಾಂಕ: 21–01–2008 ರಂದು ಆರೋಪಿ ಶ್ರೀ ಪ್ರಕಾಶ್ ರವರನ್ನು ಅವರ ಕಛೇರಿಯಲ್ಲಿ ವಿಚಾರಿಸಲಾಗಿ, ನಿಯಮಾನುಸಾರ ವೇತನ ತಡೆಹಿಡಿಯಲು ಬರೆಯಲಾಗಿದೆ ಎಂದಾಗಲೀ ಅಥವಾ ಸಮಜಾಯಿಷಿಯನ್ನು ಪರಿಗಣಿಸದಿರುವುದಕ್ಕೆ ಇತರೇ ಸಮಂಜಸ ಕಾರಣ ನೀಡಿರುವುದಿಲ್ಲ. ಬದಲಿಗೆ, ತನಗೆ ಅಂದರೆ ಶ್ರೀ ಪ್ರಕಾಶ್ ರವರಿಗೆ ರೂ. 1000–00 ಗಳು ಮತ್ತು ಶ್ರೀ ಕಟ್ಟೀಮನಿ ರವರಿಗೆ ರೂ. 5000–00 ಗಳ ಲಂಚವನ್ನು ಕೊಟ್ಟಲ್ಲಿ ಎಲ್ಲವನ್ನೂ ಸರಿಪಡಿಸಲಾಗುವುದೆಂದು ಶ್ರೀ ಪ್ರಕಾಶ್ ರವರು ಶ್ರೀ ನಾಗರಾಜ್ ರವರನ್ನು ಕೇಳಿರುತ್ತಾರೆ. ದಿನಾಂಕ: 21–01–2008 ರಂದು ಆರೋಪಿತ ಶ್ರೀ ಪ್ರಕಾಶ್ ರವರು ರೂ. 6000–00 ಗಳ ಲಂಚದ ಹಣವನ್ನು ಪಡೆದುಕೊಂಡ ನಂತರ, ಶ್ರೀ ಪ್ರಕಾಶ್ ರವರಿಂದ ರೂ. 1500–00 ಗಳು ಮತ್ತು ಶ್ರೀ ಕಟ್ಟೀಮನಿ ರವರಿಂದ ರೂ. 4500–00 ಗಳ ಲಂಚದ ಹಣವನ್ನು ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿತ್ರದುರ್ಗ ಇವರು ಪಂಚನಾಮೆ ಮೂಲಕ ವಶಪಡಿಸಿಕೊಂಡಿರುತ್ತಾರೆ. ತಮ್ಮ ಬಳಿ ಈ ಫೆನಾಪ್ತಲಿನ್ ಹಣ ಹೇಗೆ ಬಂತೆಂಬುದಕ್ಕೆ ಆರೋಪಿತರು ಸಮಾಧಾನಕರ ಸಮಜಾಯಿಷಿ ನೀಡಲು ವಿಫಲರಾಗಿರುತ್ತಾರೆ ಮತ್ತು ಶ್ರೀ ನಾಗರಾಜ್ ಹಾಗೂ ಇತರರ ಹೇಳಿಕೆಗಳು ಮತ್ತು ಸಂಬಂಧಿಸಿದ ದಾಖಲಾತಿಗಳು ಹಾಗೂ ಪೊಲೀಸ್ ನಿರೀಕ್ಷಕರ ವರದಿಯು ಆರೋಪಿತರು ದುರ್ನಡತೆ ಎಸಗಿರುವುದಕ್ಕೆ ಪೂರಕವಾಗಿರುತ್ತದೆ. ಇವರುಗಳ ಈ ವರ್ತನೆಯ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 7(2) ರಡಿ ಸ್ವಯಂಪ್ರೇರಿತ ತನಿಖೆ ನಡೆಸಿ, ಇವರುಗಳ ವರ್ತನೆಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966 ರ ನಿಯಮ 3 (1) ರ ರೀತ್ಯಾ ಸರ್ಕಾರಿ ನೌಕರರಿಗೆ ತರವಲ್ಲದ ದುರ್ನಡತೆಯಾಗಿದೆಯೆಂದೂ, ಇವರುಗಳ ವಿರುದ್ಧ ಶಿಸ್ತು ಕ್ರಮವನ್ನು ಪ್ರಾರಂಭಿಸಲು ಶಿಫಾರಸು ಮಾಡುತ್ತಾ ಮತ್ತು ಈ ಶಿಸ್ತು ಕ್ರಮದ ವಿಚಾರಣೆಯನ್ನು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 14–ಎ ರೀತ್ಯಾ ಉಪ ಲೋಕಾಯುಕ್ತರ ಪ್ರಾಧಿಕಾರಕ್ಕೆ ವಹಿಸುವಂತೆ ಸನ್ಮಾನ್ಯ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 12(3) ರಡಿ ಸಲ್ಲಿಸಿದ ವರದಿಯನ್ನು ಲಗತ್ತಿಸಿರುತ್ತಾರೆ.

2. ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನಂತೆ, ಶ್ರಿ ಜಿ.ಹೆಚ್. ಕಟ್ಟೀಮನಿ, ಹಿಂದಿನ ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ ಮತ್ತು ಶ್ರೀ ಕೆ.ಎಸ್. ಪ್ರಕಾಶ್, ಪ್ರಥಮ ದರ್ಜೆ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ ಇವರುಗಳ ವಿರುದ್ಧದ ದುರ್ನಡತೆ ಆರೋಪದ ಬಗ್ಗೆ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14–ಎ ರನ್ವಯ ಈ ಶಿಸ್ತುಕ್ರಮದ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತ–2 ರವರಿಗೆ ವಹಿಸುವಂತೆ ಮಾಡಲಾಗಿರುವ ಶಿಫಾರಸನ್ನು ಮತ್ತು ಸಂಬಂಧಿಸಿದ ದಾಖಲಾತಿ ಪ್ರತಿಗಳನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 067 ಡಿಜಿಡಬ್ಲ್ಯು 2012 ಬೆಂಗಳೂರು, ದಿನಾಂಕ : 29ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಶ್ರಿ ಜಿ.ಹೆಚ್. ಕಟ್ಟೀಮನಿ, ಹಿಂದಿನ ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ ಮತ್ತು ಶ್ರೀ ಕೆ.ಎಸ್. ಪ್ರಕಾಶ್, ಪ್ರಥಮ ದರ್ಜೆ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿತ್ರದುರ್ಗ ಇವರುಗಳ ವಿರುದ್ಧ ಪ್ರಸ್ತಾವನೆಯಲ್ಲಿ ಹೇಳಲಾದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಸನ್ಮಾನ್ಯ ಉಪ ಲೋಕಾಯುಕ್ತ–2 ರವರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಹೆಚ್. ಕುರಿಯವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಪದವಿ ಪೂರ್ವ ಶಿಕ್ಷಣ)

ಪಿ.ಆರ್. 708

## FOREST, ECOLOGY AND ENVIRONMENT SECRETARIAT

**Sub :** Diversion of 23.166 ha. of forest land in Madikeri, Virajpet & Hunsur Division of Mysore & Kodagu Districts for construction of 400 KV DC Transmission Line between Mysore and Kozhikode in favour of Power Grid Corporation of India.

**Read :**

1. Letter No. A5 (2) GFL.CR.11/05-06, dated: 08/06/2010 of the Principal Chief Conservator of Forest, Bangalore.
2. State Government letter No. FEE 112 FGL 2007, dated: 19/10/2010.
3. Letter No. F.No. 4-KRC747/2010-BAN/9998, 28th October 2011 of Government of India, Ministry of Environment and Forests, Bangalore.
4. Letter No. A5(2)GFL.CR.11/05-06, dated: 08/12/2011 of the Principal Chief Conservator of Forest, Bangalore.
5. State Government letter No. FEE 112 FGL 2007, dated: 02/02/2012.

6. Letter No.F.No. 4-KRC 747/2010-BAN/602,7th February 2012 of Government of India, Ministry of Environment and Forests, Bangalore.

**Preamble:**

The Principal Chief Conservator of Forests, Bangalore vide letter dated 08.06.2010 read at (1) above had submitted a proposal to obtain the approval of Government of India under Section 2 of the Forest (Conservation) Act, 1980 for diversion of 23.166 ha. of forest land in Madikeri and Virajpet Divisions of Kodagu District and Hunsur Division of Mysore District for construction of 400 KV DC Transmission Line between Mysore and Kozhikode in favour of Power Grid Corporation of India subject to certain conditions.

2. Accordingly, the proposal was recommended to Government of India for approval vide State Government letter dated 19/10/2010 read at (2) above.

3. The Government of India Ministry of Environment and Forests, Bangalore agreed to the proposal in principle (Stage-I) under Section 2 of the Forest (Conservation) Act, 1980 vide their letter dated: 28th October 2011 read at (3) above, subject to fulfillment of certain conditions.

4. The principal Chief conservator of Forests submitted the compliance report vide his letter dated 08.12.2011 read at (4) above and the same has been sent to Government of India vide State Government letter dated: 02/02/2012 read at (5) above.

5. The Government of India, Ministry of Environment and Forests, Bangalore vide their letter dated 7th February 2012 read at (6) above has conveyed their approval (Stage-II) under Section 2 of the Forest (Conservation) Act, 1980 for diversion of 23.166 ha. of forest land in Madikeri, Virajpet & Hunsur Division of Mysore & Kodagu Districts for construction of 400 KV DC Transmission Line between Mysore and Kozhikode in favour of Power Grid Corporation of India subject to certain conditions.

The proposal has been examined in detail and hence the order.

**Government Order No. FEE 112 FGL 2007, Bangalore, Dated: 01-03-2012**

In the circumstances explained above in the preamble, the Government is pleased to accord sanction under Section 2 of the Forest (Conservation) Act, 1980 for diversion of 23.166 ha. of forest land in Madikeri, Virajpet & Hunsur Division of Mysore & Kodagu Districts for construction of 400 KV DC Transmission lIne between Mysore and Kozhikode in favour of Power Grid Corporation of India subject to the following conditions.

1. The legal status of the forest land shall remain unchanged.
2. Demarcation of the proposed forest area shall be carried out by erecting permanent RCC boundary pillars duly numbered at an interval of 20 mts. At the cost of user agency. The area may be handed over to the user agency only after demarcation of the porposed forest area is completed.
3. Compensatory afforestation shall be raised over double the extent of degraded forest land (46,332 ha.) at the cost of user agency.
4. The additional amount of the Net Present Value (NPV) of the diverted forest land, if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to the designated Adhoc CAMPA Account.
5. The additional safeguards/conditions proposed by the State Government, PCCF (Wildlife) Bangalore and CCF (Project Elephant), Mysore shall be complied with.
6. The total forest area utilized for the project shall not exceed 23,166 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
7. The lease is for a period of 20 years.
8. The land shall be utilized only for the purpose for which it is released.
9. The User Agency has to pay the lease rent as fixed by the Government at the time of sanction and any subsequent Orders in this regard.
10. In case the forest land is not used for the stipulated purpose or when it is no longer needed for the stipulated purpose, the area should automatically revert to the Karnataka Forest Department.
11. The Karnataka Forest Act, 1963 and Rules, 1969 will be applicable for any violation.
12. Only minimum number of trees shall be cut based on actual requirement of the project.
13. The User Agency shall pay the extraction and transportation charges of trees and bamboos from the proposed forest land as estimated by the Deputy Conservators of Forests.
14. The User Agency shall pay the Net Present Value (NPV) as per the Orders dated 28-3-2008 and 9-5-2008 of the Hon'ble Supreme Court of India.
15. Even though proposed alignment area of transmission line is outside the Nagarhole National Park, the propose Reserved Forest areas are part of Mysore Elephant Reserve and also from the corridor, joining the parts of elephant home range of the eastern and western part of Kodagu District to the forests to Nagarhole National park and Wynad Wildlife Sanctuary. Considering the elephant ecology and behaviour in view, sometimes the elephants do move out of the notified Protected Areas/Reserved Forests to enter in the surrounding private;other Government lands. The

areas of Kodagu District falling in the proposed transmission line alignment have a hilly terrain. Therefore the extra height of 6 Meters of null point (the height of the sag of lowest conductor from the ground), besides the mandatory 9 Meters i.e. total 9+6=15 Meters needs to be provided in the entire stretch of Kodagu District & forest areas of Periyapatna Range by extending the towers height suitably. The 'sag' point between the two towers should be at least 15 Meters above the ground level. This will ensure that the elephants do not reach to the high voltage cables even with their trunks stretched.

16. If possible, keeping the stipulated minimum clearance beneath the lowest conductor, the remaining ground cover may be retained to provide some vegetation as a cover to the moving elephants. Further it should be ensured that in future also this minimum clearance is maintained scrupulously.
17. While carrying out the work, it must seen that it should be done in phases to minimize the disturbance to the elephants in the area and the work of each phase should be completed at the earliest. The entire forest stretch of 4.455 kms. may be divided in two patches with one half of this stretch taken at a time. Once the work is started, it should be completed quickly.
18. Care Should be taken to avoid any damage to the bamboo regeneration in the area. Movement of men/machinery should be done with utmost care.
19. As there is no possibility of using insulated cables for 400 KV transmission line (as informed by the official of the Power Grid Corporation of India Ltd.), the auto power trip systems must be used to avoid any accidents.
20. As recommended in the "Gajah' the Elephant Task Force report, in case of death of wildlife (including elephants) due to high voltage, adequate compensation should be paid by Power Grid Corporation of India Ltd. The some of the other recommendations of Task Force report include that-
    i) The Power Grid Company should come with an award scheme for persons who inform them about sagging power line and poles to prevent accidents to both human and wildlife.
    ii) Such matters of forest clearance should be sent to NECA for permission.
21. To strengthen the various measures of elephant conservation and management in these Forest Divisions and to reduce any disturbance which may be caused due to the project, the National Power Grid Corporation of India Ltd, shall provide assistance to the Forest Department in terms of vehicles/man power/funds support, whenever needed.
22. Any other conditions imposed by the Government of India/Government of Karnataka will have to be abided by the lessee.

By Order and in the name of the Governor of Karnataka,

**G.H. Anasuyamma**

Under Secretary to Government

Forest, Ecology and Environment Department

P.R. 729

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಜಿ.ಹೆಚ್. ನಾಗಹನುಮಯ್ಯ, ತಹಶೀಲ್ದಾರ್, ಇವರು ಈ ಹಿಂದೆ ರೋಣಾ ತಾಲ್ಲೂಕಿನ ತಹಶೀಲ್ದಾರ್ ಆಗಿದ್ದಾಗ ನಿಯಮ ಉಲ್ಲಂಘನೆ ಮಾಡಿ ಜಾತಿ ಪ್ರಮಾಣ ಪತ್ರ ನೀಡಿರುತ್ತಾರೆ ಎಂಬುದರ ಆರೋಪದ ಮೇಲೆ ಇಲಾಖಾ ವಿಚಾರಣೆ ಹೂಡುವ ಬಗ್ಗೆ

**ಓದಲಾಗಿದೆ:**
1) ಕಂಇ 13 ಎಡಿಇ 2011, ದಿನಾಂಕ: 28.03.2011
2) ದಿನಾಂಕ: 30.03.2011 ಕ್ಕೆ ಕಾರಣ ಕೇಳುವ ನೋಟೀಸಿಗೆ ಉತ್ತರ
3) ಜಿಲ್ಲಾಧಿಕಾರಿಗಳ, ಕಾರ್ಯಾಲಯ ಇವರ ಪತ್ರ ಸಂಖ್ಯೆ:ಗ್ರಾಪಂ / ಚುನಾವಣೆ / ವಹಿ/94/2010–11, ದಿನಾಂಕ: 05.08.2011 ರಲ್ಲಿ ದೋಷಾರೋಪಣಾ ಪಟ್ಟಿ.
4) ಕಾರಣ ಕೇಳುವ ನೋಟೀಸ್ ಪತ್ರ ಸಂಖ್ಯೆ:ಆರ್‌ಡಿ 13 ಎಡಿಇ 2011, ದಿನಾಂಕ: 10.08.2011.
5) ಕಾರಣ ಕೇಳುವ ನೋಟೀಸಿಗೆ ಉತ್ತರ ದಿನಾಂಕ: 30.09.2011 ರಂದು ಸಲ್ಲಿಕೆ.

**ಪ್ರಸ್ತಾವನೆ :**

ಶ್ರೀ ನಾಗಹನುಮಯ್ಯ, ತಹಶೀಲಾರ್, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಈ ಹಿಂದೆ ರೋಣಾ ತಾಲ್ಲೂಕಿನ ತಹಶೀಲ್ದಾರ್ ಆಗಿದ್ದಾಗ ಶ್ರೀ ಶರಣಪ್ಪ ಹನುಮಪ್ಪ ಆನಂದಪ್ಪ ಸದರ ಎಂಬುವವರಿಗೆ ದಿ: 16.06.2010 ರಂದು ಅವರ ಶಾಲಾ ವರ್ಗಾವಣೆ ಪತ್ರ ಮತ್ತು ಗ್ರಾಮ ಲೆಕ್ಕಾಧಿಕಾರಿ, ಬೊಮ್ಮಸಾಗರ ಮತ್ತು ರಾಜಸ್ವ ನಿರೀಕ್ಷಕರು, ರೋಣ ಇವರ ವರದಿಯನ್ನು ಪರಿಗಣಿಸಿ ಚುನಾವಣೆ ಉದ್ದೇಶಕ್ಕಾಗಿ ಹಿಂದು ಲಿಂಗವಂತ ಜಾತಿಗೆ ಸೇರಿರುವುದಾಗಿ ಪ್ರವರ್ಗ–ಬಿ ವರ್ಗದ ಜಾತಿ ಪ್ರಮಾಣ ಪತ್ರವನ್ನು ನೀಡಿರುತ್ತಾರೆ. ಆದರೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಅಧಿಸೂಚನೆ ಸಂಖ್ಯೆ: ಆರ್‌ಡಿಪಿ 5 ಜೆಡ್.ಪಿ.ಎಸ್ 95 (i) ದಿ: 13.01.1995 ರಲ್ಲಿ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಹಾಗೂ ಗ್ರಾಮ ಪಂಚಾಯಿತಿಯ ಅಧ್ಯಕ್ಷರ ಹುದ್ದೆಗಳಿಗೆ ಜಾತಿ ಆಧಾರದ ಮೇಲೆ ಮೀಸಲಾತಿ ನಿಗದಿಪಡಿಸಿ ಹೊರಡಿಸಿರುವ ಅಧಿಸೂಚನೆಯಲ್ಲಿ ಪ್ರವರ್ಗ–ಬಿ ಗುಂಪಿನಲ್ಲಿ ವೀರಶೈವ ಲಿಂಗಾಯಿತ ಮತ್ತು ಅದರ ಉಪ ಜಾತಿಗಳನ್ನು ನಮೂದಿಸಿದ್ದು, ಅದರಲ್ಲಿ ಹಿಂದು ಲಿಂಗವಂತ ಎಂಬ ಉಪ ಜಾತಿಯನ್ನು ನಮೂದಿಸಿರುವುದಿಲ್ಲ ಆದಾಗ್ಯೂ ಹಿಂದು ಲಿಂಗವಂತ ಎಂಬುದು ವೀರಶೈವ ಲಿಂಗಾಯಿತ ಉಪ ಜಾತಿಯೇ ಎಂದು ಪರಿಗಣಿಸಬೇಕೆ ಬೇಡವೇ ಎಂಬ ಬಗ್ಗೆ ಸೂಕ್ತ ಪರಿಶೀಲನೆ ಮಾಡಿ ಸ್ಥಾನಿಕ ಪಂಚನಾಮೆ ಮಾಡಿ ಮತ್ತು ಮಚಕಾಷಿ ಮಾಡಿ ಅರ್ಜಿದಾರರು ಕ್ಲೇಮ್ ಮಾಡಿದ್ದ ಹಿಂದು ಲಿಂಗವಂತ

ಎಂಬುದು ವೀರಶೈವ ಲಿಂಗಾಯತ ಉಪ ಜಾತಿಗೆ ಸೇರಿದೆಯೇ ಎಂಬ ಬಗ್ಗೆ ಪರಿಶೀಲನೆ ನಡೆಸದೇ, ಅರ್ಜಿದಾರರು ಸಲ್ಲಿಸಿದ್ದ ಶಾಲಾ ಪ್ರಮಾಣ ಪತ್ರ ಆಧರಿಸಿ ಮತ್ತು ಗ್ರಾಮ ಲೆಕ್ಕಾಧಿಕಾರಿ ಮತ್ತು ರಾಜಸ್ವ ನಿರೀಕ್ಷಕರು ವರದಿ ಮಾಡಿರುವುದನ್ನೇ ಆಧರಿಸಿ ಜಾತಿ ಪ್ರಮಾಣ ಪತ್ರ ನೀಡಿರುವುದು ಕಂಡು ಬರುತ್ತದೆ.

ಈ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರ.ಸಂ. (1) ರಲ್ಲಿ ಶ್ರೀ ಹೆಚ್. ನಾಗಹನುಮಯ್ಯ ತಹಶೀಲ್ದಾರ್, ಇವರಿಗೆ ಕಾರಣ ಕೇಳುವ ನೋಟೀಸನ್ನು ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿ ಶ್ರೀ ಹೆಚ್. ನಾಗಹನುಮಯ್ಯ, ತಹಶೀಲ್ದಾರ್, ರೋಣ ಇವರು ದಿ: 16.06.2010 ರಂದು ತಮ್ಮ ಪ್ರತಿರಕ್ಷಣಾ ಹೇಳಿಕೆಯಲ್ಲಿ ತಾವು ಯಾವುದೇ ಕರ್ತವ್ಯಲೋಪ ಎಸಗಿರುವುದಿಲ್ಲವೆಂದು ತಿಳಿಸಿ ಇವರ ವಿರುದ್ಧ ಶಿಸ್ತು ಕ್ರಮವನ್ನು ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತ ಅಧಿಕಾರಿ ಮೇಲೆ ಇರುವ ಆರೋಪ ಮತ್ತು ಅವರು ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರವನ್ನು ಪರಿಶೀಲಿಸಿದಾಗ, ಆರೋಪಿತ ಅಧಿಕಾರಿಗಳು ಕರ್ತವ್ಯಲೋಪ ಎಸಗಿರುವುದು ಕಂಡು ಬಂದಿದ್ದರಿಂದ, ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ತೀರ್ಮಾನಿಸಿ ಆರೋಪಿತ ಅಧಿಕಾರಿಗಳ ವಿರುದ್ಧ ಅನುಬಂಧ 1 ರಿಂದ 4 ರವರೆಗೆ ಗದಗ್ ಜಿಲ್ಲಾಧಿಕಾರಿಗಳನ್ನು ಮೇಲೆ ಓದಲಾದ ಕ್ರ.ಸಂ.(3) ರ ದಿನಾಂಕ: 05.08.2011 ರ ಪತ್ರದಲ್ಲಿ ಕೋರಲಾಗಿದ್ದು, ಅದರಂತೆ ಮೇಲೆ ಓದಲಾದ ಕ್ರ.ಸಂ. (4) ರಲ್ಲಿ ಆರೋಪಿತ ಅಧಿಕಾರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ಸದರಿಯವರ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರ.ಸಂ. (5) ರಲ್ಲಿ ನನ್ನ ಮೇಲೆ ಮಾಡಿರುವ ಆಪಾದನೆಗಳಲ್ಲಿ, ಯಾವುದೇ ಹುರುಳಿರುವುದಿಲ್ಲವೆಂದು ಹೇಳಿ ನನ್ನ ಕರ್ತವ್ಯದಲ್ಲಿ ಯಾವುದೇ ಲೋಪ ಇಲ್ಲದೇ ಇರುವುದರಿಂದ ನನ್ನ ವಿರುದ್ಧ ಕೈಗೊಂಡಿರುವ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಆದುದರಿಂದ, ಆರೋಪಿತ ಅಧಿಕಾರಿಗಳು ತಮ್ಮ ಮೇಲೆ ಇರುವ ಆರೋಪಗಳನ್ನು ನಿರಾಕರಿಸುತ್ತಾರೆ.

ಆದ್ದರಿಂದ, ದೋಷಾರೋಪಣೆಗಳಲ್ಲಿ ವಿವರಿಸಿರುವ ಆಪಾದನೆಗಳ ಸತ್ಯಾಸತ್ಯತೆಗಳನ್ನು ಪರಿಶೀಲಿಸಲು ವಿಚಾರಣೆ ಹೂಡುವುದು ಅವಶ್ಯವಾಗಿದ್ದು ನಿವೃತ್ತ ನ್ಯಾಯಾಧೀಶರಾದ ಶ್ರೀ ಎಸ್.ಜಿ. ಪಲ್ಲೇದ್, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಈಗಿರುವ ರೋಣಾ ತಹಶೀಲ್ದಾರರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ ಸರ್ಕಾರವು ನಿರ್ಧರಿಸಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 13 ಎಡಿಇ 2011, ಬೆಂಗಳೂರು, ದಿನಾಂಕ: 22–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯ ಕಾರಣಗಳಿಂದಾಗಿ, 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜಿ.ಹೆಚ್. ನಾಗಹನುಮಯ್ಯ, ತಹಶೀಲ್ದಾರ್, ರೋಣಾ ತಾಲ್ಲೂಕು, ಗದಗ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ನ್ಯಾಯಾಧೀಶರಾದ ಶ್ರೀ ಎಸ್.ಜಿ. ಪಲ್ಲೇದ್ ವಿಚಾರಣಾಧಿಕಾರಿಯನ್ನಾಗಿ ಮತ್ತು 1957 ರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈಗಿರುವ ರೋಣಾ ತಹಶೀಲ್ದಾರರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಗದಗ ಜಿಲೆ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ, ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು, ಈ ಉದ್ದೇಶಕ್ಕಾಗಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಗದಗ, ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 06 ಸೇಇವಿ 2010, ಬೆಂಗಳೂರು, ದಿನಾಂಕ: 28.04.2011 ರನ್ವಯ ರೂ. 15,000/– (ಹದಿನೈದು ಸಾವಿರ ರೂಪಾಯಿಗಳು) ಮಾತ್ರ ಸಂಭಾವನೆ (ವಾಹನ ಭತ್ಯೆಯೂ ಸೇರಿರುತ್ತದೆ) ಮಂಡನಾಧಿಕಾರಿಗೆ ವಿಚಾರಣೆಯ ದಿನವೊಂದಕ್ಕೆ ರೂ. 400/– (ನಾಲ್ಕುನೂರು) ಸಂಭಾವನೆಯನ್ನು ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಮೂರು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 730

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕಂಇ 463 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 21.2.2012**

ಸರ್ಕಾರದ ಆದೇಶ ಸಂಖ್ಯೆ: ಕಂಇ 463 ಎಎಸ್‌ಡಿ 2010 ದಿನಾಂಕ: 25–8–2011 ರ ಆದೇಶದ ಭಾಗದ 7ನೇ ಸಾಲಿನಲ್ಲಿ **"2(1)(ಎ)"** ಎಂದು ನಮೂದಿಸಿರುವುದನ್ನು **"2(1)(ಸಿ)"** ಎಂದು ಸರಿಪಡಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 731

## ಕಂದಾಯ ಸಚಿವಾಲಯ

**ವಿಷಯ :** 2011-12ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ, ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

2011-12ನೇ ಸಾಲಿನಲ್ಲಿ ಮುಂಗಾರು ಮಳೆ ವಿಫಲವಾಗಿ, ರಾಜ್ಯದ 24 ಜಿಲ್ಲೆಗಳ 123 ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ ಉಂಟಾಗಿರುತ್ತದೆ. ಬರ ಪರಿಸ್ಥಿತಿಯನ್ನು ಎದುರಿಸಲು ಕುಡಿಯುವ ನೀರು ಸರಬರಾಜು, ಜಾನುವಾರುಗಳಿಗೆ ಮೇವು ಒದಗಿಸುವ ಮತ್ತು ಜಾನುವಾರು ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳು ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು, ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ: ಕಂಇ 190 ಟಿಎನ್ಆರ್ 2011, ಬೆಂಗಳೂರು, ದಿನಾಂಕ: 27-02-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಂಗಾರು ಮಳೆಯ ಕೊರತೆಯಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ಹಾನಿಗಳಿಗೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆ | ಬಿಡುಗಡೆ ಮಾಡಿದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1. | ಬಿಜಾಪುರ | 250.00 |
| 2. | ಬೀದರ್ | 250.00 |
| 3. | ಬಳ್ಳಾರಿ | 200.00 |
| 4. | ಗುಲ್ಬರ್ಗ | 100.00 |
| 5. | ಚಾಮರಾಜನಗರ | 100.00 |
| 6. | ಚಿತ್ರದುರ್ಗ | 400.00 |
| 7. | ಚಿಕ್ಕಬಳ್ಳಾಪುರ | 100.00 |
| 8 | ಹಾಸನ | 100.00 |
| 9. | ದಾವಣಗೆರೆ | 200.00 |
| 10. | ರಾಯಚೂರು | 400.00 |
| 11. | ಹಾವೇರಿ | 100.00 |
| 12. | ಮಂಡ್ಯ | 200.00 |
| 13. | ತುಮಕೂರು | 500.00 |
| 14. | ಯಾದಗಿರಿ | 100.00 |
| | ಒಟ್ಟು | 3000.00 |

(ರೂಪಾಯಿ ಮೂರು ಸಾವಿರ ಲಕ್ಷಗಳು ಮಾತ್ರ)

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಸಮಾಲೋಚಿಸಿ ಈ ಕೆಳಕಂಡಂತೆ ನಿರ್ದೇಶನಗಳಿಗೆ ಒಳಪಟ್ಟು ಅನುದಾನವನ್ನು ಬಳಸುವುದು.

ಅ) ಕುಡಿಯುವ ನೀರಿನ ವ್ಯವಸ್ಥೆ.

ಆ) ಜಾನುವಾರುಗಳ ಸಂರಕ್ಷಣೆ.

ಇ) ಬರಪೀಡಿತ ಪ್ರದೇಶಗಳಿಗೆ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ನಿಯಮಿತವಾಗಿ ಪ್ರವಾಸ ಮಾಡುವುದು.

ಈ) ಪ್ರತಿ ಹೋಬಳಿಗೆ ಒಬ್ಬ ಜಿಲ್ಲಾ ಮಟ್ಟದ ನೋಡಲ್ ಅಧಿಕಾರಿಯನ್ನು ನೇಮಿಸಿ ಅವರಿಂದ ಬರಪರಿಹಾರ ಕಾಮಗಾರಿಗಳು, ಜಾನುವಾರು ಸಂರಕ್ಷಣೆ ಮತ್ತು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನಿರ್ವಹಿಸಲಾಗುತ್ತಿರುವ ಕಾಮಗಾರಿಗಳ ಪರಿಶೀಲನೆ ಮಾಡುವುದು.

ಉ) ಪ್ರತಿ ತಾಲ್ಲೂಕಿನಲ್ಲಿ ಶಾಸಕರ ಅಧ್ಯಕ್ಷತೆಯಲ್ಲಿ ಬರಪರಿಹಾರ ಕಾಮಗಾರಿಗಳಿಗೆ ಸಂಬಂಧಿಸಿದಂತೆ (ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನೂ ಸೇರಿಸಿದಂತೆ) ಕ್ರಿಯಾ ಯೋಜನೆಗಳನ್ನು ಸಿದ್ಧಪಡಿಸಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ಕರೆದು ಕಾರ್ಯ ಯೋಜನೆಗಳನ್ನು ಸಿದ್ಧಪಡಿಸಿ ಯುದ್ಧೋಪಾದಿಯಲ್ಲಿ ಜಾರಿಗೊಳಿಸುವುದು.

ಊ) ಜಿಲ್ಲಾ ಉಸ್ತುವಾರಿ ಸಚಿವರುಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು

ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಈ ವಿಷಯದಲ್ಲಿ ಜಿಲ್ಲಾಧಿಕಾರಿಗಳು ಸೂಕ್ತ ಕ್ರಮವಹಿಸುವುದು.

ಋ) ಪ್ರತಿ 15 ದಿನಗಳಿಗೊಮ್ಮೆ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಜಂಟಿಯಾಗಿ ಬರ ಪರಿಹಾರ ಕಾಮಗಾರಿಗಳ ಬಗ್ಗೆ ಪತ್ರಿಕಾಗೋಷ್ಠಿ ನಡೆಸಿ ಮಾಧ್ಯಮಗಳಿಗೆ ಜಿಲ್ಲೆಯಲ್ಲಿ ಕೈಗೊಂಡಿರುವ ಕುಡಿಯುವ ನೀರು, ಜಾನುವಾರು ಸಂರಕ್ಷಣೆ, ಉದ್ಯೋಗ ಖಾತರಿ ಯೋಜನೆ ಮತ್ತು ಬರಪರಿಹಾರಕ್ಕೆ ಸಂಬಂಧಿಸಿದಂತೆ ಸಾಧಿಸಿರುವ ಪ್ರಗತಿಯ ಚಿತ್ರಣವನ್ನು ಬಿಂಬಿಸುವುದು.

2) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ಎನ್‌ಡಿಆರ್‌ಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಎಸ್.ಡಿ.ಆರ್.ಎಫ್ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2011–12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–800–1–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆ.ಇ 176 ವೆಚ್ಚ–7/2011, ದಿನಾಂಕ: 23–02–2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ಆನಂದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 732

## REVENUE SECRETARIAT

**Sub :** Grant of 71.16 acres of Government land in various survey numbers of Billakempanahalli, Banandur and Shanumangala Villages, Bidadi Hobli, Ramanagara District out of 132.26 acres of Government land encroached by M/s. Chamundeshwari Buildtech Pvt., Ltd.,

**Read :**
1) Letter No. LND (B) SR26/97-98, dated: 19-01-2001 from the Divisional Commissioner, Bangalore Division.
2) Judgment dated 02.04.2002 in W.P.No. 29705/2000 from the Hon'ble High Court of Karnataka.
3) Judgment dated 02.04.2002 in W.P.No. 2493/2001 from the Hon'ble High Court of Karnataka.
4) Judgment dated: 22.08.2002 in W.A.No. 2861/2002 and W.A.No. 2887/2002.
5) Interim Orders dated: 03-03-2011 from the Hon'ble High Court of Karnataka of the Hon'ble Supreme Court of India in Civil Appeal No. 5181-5182/2003.
6) Letters No. Rajika/LNDCR 109/10-11, dated: 7-7-2011 and dated: 29.08-2011 from the Deputy Commissioner, Ramanagar District.

**Preamble:**

The Divisional Commissioner, Bangalore Division vide his Letter No. LND (B) SR 26/97-98, Dtd: 19.01.2011, had reported that in various Survey Numbers of Banandur, Shanumangala and Billakempanahalli Villages, Bidadi Hobli, Ramanagara Taluk, Bangalore Rural District, M/s. Chamundeshwari Buildtech Private Limited, Bangalore have taken up a project called "Eagleton Golf Village" and the details of the land held by this company for the said project is as follows:-

| Sl.No. | Details | Extent (A/G) |
|---|---|---|
| 1 | Land purchased from the land owners | 278.01 |
| 2 | Land that has been acquired by KIADB | 16.26 |
| 3 | Land purchased from the Dharakhasthdars in violation of rules | 31.18 |
| 4 | The land held in excess of the purchase | 0.20 |
| 5 | 'A' Kharab land (unauthorized) | 63.15 |
| 6 | 'B' Kharab land (unauthorized) | 10.22 |
| 7 | Unauthorizedly encroached gomal land | 103.13 |
| | **Total** | **503.35** |

2) The Divisional Commissioner, Bangalore Division had also reported that the said Company was in possession of excess land than the land purchased including Government land as follows:-

| Sl.No. | Details | Extent (A/G) |
|---|---|---|
| 1 | Lands purchased in violation of Dharkasth rules | 31.18 |
| 2 | A Kharab land | 63.15 |
| 3 | B Kharab land | 10.22 |
| 4 | Illegal encroachment of Government gomal land | 103.13 |
| | **Total** | **208.28** |

3) The Tahsildar Ramanagar had issued a notice as per section 104 of KLR Act 1964 to the company on 21.02.1997 to vacate the encroached 'B' kharab land measuring 10.22 acres. The Company had Challenged this notice before the Karnataka Appellate Tribunal and the same was rejected. Further the Company approached the Hon'ble High Court of Karnataka in W.P.No. 29705/2000 and the same was dismissed. Further the notices were also issued to the company for violation of Section 79A and 79B of the Karnataka Land Reforms Act 1961. The company had filed Writ Petition No. 2493/2001 before the Hon'ble High Court of Karnataka. The Hon'ble High Court of Karnataka in its judgment Dtd: 02.04.2002, dismissed the said petition of the company and had passed strictures holding the company as "land grabber" and had also imposed a cost of Rs. 10,000/-

4) M/s Chamundeshwari Buildtech Pvt., Ltd., challenged the orders passed by the Hon'ble High court of Karnataka in the above mentioned Writ petitions before the Division Bench of Hon'ble High court of Karnataka in W.A. No. 2861/2002 and 2887/2002 respectively. Both the Writ Appeals have been rejected by the Hon'ble High Court of Karnataka.

5) Chamundeshwari Buildtech Pvt. Ltd., preferred S.L.P. No. 18257/2002 before the Hon'ble Supreme Court of India against the order Dtd: 22.08.2002 of the Division Bench of the Hon'ble High Court. In the Interim Order passed by the Hon'ble Supreme Court of India on 24.09.2002, the Hon'ble Court had directed to maintain status quo. Thereafter as per the order of the Hon'ble Supreme Court on 22.10.2002, the Interim Order Dtd: 24.09.2002 has been made absolute. The SLP No. 18257/2002 has been subsequently converted into Civil Appeal No. 5181-5182/2003.

6) In the Interim Order passed on 16.04.2009 in Civil Appeal No. 5181/2003, the Hon'ble Supreme Court of India had ordered to conduct survey of the land and to identify and determine the extent of land which is said to the illegaly in the possession of the appellant and the extent of land possession of which is said to be irregular. The Hon'ble court also further directed that once the areas are identified State Government may consider whether this is a fit case for fixing the present actual market value (and not upset value) of the lands which belong to Government/KIADB and recover the same from the appellant.

7) As per the order of the Hon'ble Supreme Court of India, Survey was conducted and as per the Survey Report, it is found that M/s. Chamundeshwari Buildtech Private Limited has encroached 132 acres 26 guntas of Government land in various Survey Numbers Banandur, Shanumangala and Billakempanahalli Villages, Bidadi Hobili Ramanagara Taluk.

8) In this regard, the Principal Secretary to Government, Revenue Department, had filed an affidavit before the Hon'ble Supreme Court of India stating that the following decisions would be taken in the matter.

a) To direct the Deputy Commissioner to take suitable action Under Karnataka land Revenue Act 1964 in respect of phot Kharab (b) within the Golf Course, per se, as per the existing Rules and to extinguish public rights therein and recover market rate from the Company.

b) It is further decided to levy fine for the entire area unauthorisedly occupied and grant the said land to an extent of 55 acres 13 guntas to the Company as a special case under Rule 97(4) of the Karnataka Land Revenue Rules 1966, at market rate to be determined by Deputy Commissioner.

c) To issue notice to the land owners who got the land converted for residential purpose but sold the same to the company in violation of Section 95 and 96 of the Karnataka Land Revenue Act 1964, and to issue necessary orders under Section 96(4) of the Karnataka Land Revenue Act, 1964 and in case of refusal by the owners to pay penalty under Section 96(4) to take further action under Section 96(1) of the said Act and the provisions thereunder.

d) To take possession of the remaining Government land.

e) To vacate the building put-up on the Government land i.e., in Site No. K-22 and L-20 and some portion of building in Waste Disposal Unit.

f) To regularize 5 acres 21 guntas of A Kharab land by levying market rate as per Karnataka Land Revenue Act 1964.

g) To take action against the Company as per the Karnataka Land Reforms Act 1961 as the company possess 33 acres 25 guntas of agricultural land inside its compound.

9) Subsequently, the Hon'ble Supreme Court in its Interim Order Dtd: 03.03.2011 has passed order as follows:-

"This Court will not examine such disputed question of fact in these Appeals. We however, feel that the area of controversy can be easily narrowed down, if in the first instance, the parties sort out the issues where there is broad agreement. We therefore direct as follows:-

(a) In regard to phot Kharab 'b' land (10 acres 22 guntas), within the Eagleton Golf Village the Deputy Commissioner may take suitable action to extinguish the public rights and recover the market value thereof from the appellant (as stated in para 10(a) of the State's affidavit dated 4.9.2010)

(b) In regard to phot Kharab 'a' land (5 acres 21 guntas), action may be taken to regularize the same in terms of the Karnataka Land Revenue Act, 1964 at market rates (as stated in para 10(f) of the State's affidavit, dated 4.09.2010).

(c) In regard to an extent of 55 acres 13 guntas, the State Government may recover the actual market value to be determined by the Deputy Commissioner and convey the land to the appellant (as stated by the State Government in para 10(b) of the State's affidavit dated 4.9.2010).

10) In this regard, the Deputy Commissioner, Ramanagara District in his letter Dtd: 07.07.2011 has submitted a report to the Government for grant of Government lands in Billakempanahalli, Banandur and Shanumangala Villages, Bidadi Hobli, Ramanagara Taluk where the Eagleton Golf Course is situated as per the affidavit submitted to the Hon'ble Supreme Court of India as follows:-

| | | |
|---|---|---|
| 1. | Interim Order as per para 5(A) | - 10.22 acres ('B' Kharab Land) |
| 2. | Interim Order as per para 5(B) | - 5.21 acres ('A' Kharab Land) |
| 3. | Interim Order as per para 5(C) | - 55.13 acres (Government Gomal Land) |
| 4. | Extent of chain survey difference as per affidavit | - 6.03 acres |
| | **Total** | **77.19 acres** |

11) In his subsequent letter Dtd: 29.08.2011, the Deputy Commissioner, Ramanagar has suggested to charge prevailing market value to the above lands proposed to be granted to M/s. chamundeshwari Buildtech Private Limited.

12) In the context of the affidavit filed by the Government of Karnataka before the Hon'ble Supreme Court and as per the direction issued by the Hon'ble Supreme Court in its order Dtd: 03.03.2011, the Government is of the opinion that out of 132.26 acres of Government land encroached by M/s. Chamundeshwari Buildtech Private Limited, 71.16 acres of land only may be granted to the said company by charging prevailing market value as per rules.

Government has examined this proposal and hence the following order.

**Government Order No. RD 399 LGB 2011, Bangalore Dated: 25.02.2012**

Sanction is hereby accorded to grant 71.16 acres of Government land to M/s. Chamundeshwari Buildtech Private Limited as mentioned below out of 132 acres 26 guntas of Government land encroached by the said company in Banandur, Shanumangala and Billakempanahalli Villages, Bidadi Hobli, Ramanagara Taluk.

a) to grant 10 acres 22 guntas of 'B' Kharab land situated within the Golf Zone to the said company at the prevailing market value after extinguishing public rights on these lands as per section 68 of the Karnataka Land Revenue Act and rules.

b) to grant 5 acres 21 guntas of "A" Kharab land which is encroached by the said company, by charging full market value as per rules.

c) to grant the entire extent of 55 acres 13 guntas of Government gomal land encroached by the company by charging full prevailing market value of the said lands after reducing these lands from gomal classification as per Rule 97(4) of the Karnataka Land Revenue Rules, 1966.

The Deputy Commissioner, Ramanagar shall determine the market value of above lands as per rules and shall intimate the same to M/s. Chamundeshwari Buildtech Private Limited by 05-03-2012 for making necessary payment.

This order issues with the concurrence of the Finance Department vide U.O. note NO. FD 816/Exp-7/2011, dated 18.10.2011.

By Order and in the name of the Governor of Karnataka,

**B.K. Ramaswamy**

Under Secretary to Government

Revenue Department (Land Grants)

P.R. 734